ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಕೊಲೂರು ಮಲ್ಲಪ್ಪ

ಗಂಗಾಧರಯ್ಯ ಹಿರೇಮಠ

ದೇವೇಂದ್ರಪ್ಪಗೌಡ ಮಾ.ಪಾ.

ಪ್ರಕಟಣೆ

ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ

ವಿಧಾನಸೌಧ, ಬೆಂಗಳೂರು

**KOLURU MALLAPPA**
Eminent Parlimentarian Series
Written by
**Gangadharaiah Hiremath**
Senior Scale Lecturer, Govt Degree College,
Siruguppa. Dist-Bellary
**Devendrappa Gouda Mali Patil**
Lecturer,
Bapugouda Dharshanapura College,
Shahapur, Dist-Gulbarga.
**Published** by
Karnataka Legislature Library Committee
Vidhana Soudha, Bangalore-560001.
Page: 144 + xi Price: 20-00 Rs.

First Edition: 2006 Copies: 2000
**Printed & Designed by**
Government Press, Bangalore.

**ಕೊಲೂರು ಮಲ್ಲಪ್ಪ**
ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ
ಲೇಖಕರು:
**ಗಂಗಾಧರಯ್ಯ ಹಿರೇಮಠ**
ಹಿರಿಯ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪದವಿ ಕಾಲೇಜು,
ಸಿರಗುಪ್ಪ ಜಿಲ್ಲೆ, ಬಳ್ಳಾರಿ.
**ದೇವೇಂದ್ರಪ್ಪಗೌಡ ಮಾಲಿ ಪಾಟೀಲ**
ಉಪನ್ಯಾಸಕರು, ಬಾಪುಗೌಡ ದರ್ಶನಾಪೂರ ಪದವಿ ಕಾಲೇಜು,
ಶಹಾಪುರ, ಜಿಲ್ಲಾ ಗುಲ್ಬರ್ಗಾ.
ಪ್ರಕಾಶನ
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು-560 001.
ಪುಟ: 144 + xi ಬೆಲೆ: 20/- ರೂ.

ಮೊದಲ ಮುದ್ರಣ: 2006 ಪ್ರತಿಗಳು: 2,000
ಮುದ್ರಣ ಮತ್ತು ವಿನ್ಯಾಸ
ಸರ್ಕಾರಿ ಮುದ್ರಣಾಲಯ, ಬೆಂಗಳೂರು-560 001.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
## 2005-2006

*ಅಧ್ಯಕ್ಷರು*
ಸಚ್ಚಿದಾನಂದ ಲ.ಖೋತ
ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು
(ದಿನಾಂಕ 17.06.2006 ರಿಂದ)

*ಅಧ್ಯಕ್ಷರು*
ವಿ.ಆರ್. ಸುದರ್ಶನ್
ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು
(ದಿನಾಂಕ 17.06.2006 ರವರೆಗೆ)

*ಸದಸ್ಯರು*

ಕೃಷ್ಣ
ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

ವಿಶ್ವನಾಥ್ ಪಾಟೀಲ್ ಹೆಬ್ಬಾಳ್
ವಿಧಾನಸಭಾ ಸದಸ್ಯರು ಹಾಗೂ
ಉಪ ಸಮಿತಿಯ ಅಧ್ಯಕ್ಷರು

ಜಿ.ಎಸ್. ಗಡ್ಡದೇವರ ಮಠ
ವಿಧಾನಸಭಾ ಸದಸ್ಯರು
ಆರ್. ಧ್ರುವನಾರಾಯಣ್
ವಿಧಾನಸಭಾ ಸದಸ್ಯರು
ಕಳಕಪ್ಪ ಜಿ. ಬಂಡಿ
ವಿಧಾನಸಭಾ ಸದಸ್ಯರು
ಡಾ॥ ವೀರಬಸವಂತರೆಡ್ಡಿ ಮುದ್ನಾಳ್
ವಿಧಾನಸಭಾ ಸದಸ್ಯರು
ಡಾ. ಚಂದ್ರಶೇಖರ ಬಿ. ಕಂಬಾರ
ವಿಧಾನ ಪರಿಷತ್ ಸದಸ್ಯರು
ಮುಖ್ಯಮಂತ್ರಿ ಚಂದ್ರು
ವಿಧಾನ ಪರಿಷತ್ ಸದಸ್ಯರು
(ದಿನಾಂಕ 24.07.2006 ರವರೆಗೆ)
ಉಮಾಶ್ರೀ
ವಿಧಾನ ಪರಿಷತ್ ಸದಸ್ಯರು
(ದಿನಾಂಕ 24.07.2006 ರವರೆಗೆ)
ಶ್ರೀನಾಥ್
ವಿಧಾನ ಪರಿಷತ್ ಸದಸ್ಯರು
(ದಿನಾಂಕ: 24.7.2006 ರಿಂದ)
ವೈ.ಎ. ನಾರಾಯಣಸ್ವಾಮಿ
ವಿಧಾನ ಪರಿಷತ್ ಸದಸ್ಯರು
(ದಿನಾಂಕ: 24.7.2006 ರಿಂದ)

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

---

### ಕರ್ನಾಟಕ ವಿಧಾನ ಮಂಡಲ

| | |
|---|---|
| ಡಿ'ಸೋಜ ರಾಬಿನ್‌ಸನ್ | ಪ್ರಧಾನ ಕಾರ್ಯದರ್ಶಿ |

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಅಪರ ಕಾರ್ಯದರ್ಶಿ |
| ಕೆ.ಎನ್. ಪ್ರಭಾಕರರಾವ್ | ಜಂಟಿ ಕಾರ್ಯದರ್ಶಿ |
| ಪಿ. ಓಂಪ್ರಕಾಶ್ | ಸಭಾಧ್ಯಕ್ಷರ ಕಾರ್ಯದರ್ಶಿ |
| ಎಸ್. ಬಸವರಾಜ | ಉಪ ಕಾರ್ಯದರ್ಶಿ |
| ಕೆ. ನೂರ್ ಮಹಮದ್ | ಅಧೀನ ಕಾರ್ಯದರ್ಶಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ಜಯಶಂಕರಮೂರ್ತಿ | ಕಾರ್ಯದರ್ಶಿ |
| ವಿ. ಶ್ರೀಶ್ | ಅಪರ ಕಾರ್ಯದರ್ಶಿ |
| ಕೃಷ್ಣೇಗೌಡ | ಸಭಾಪತಿಯವರ ಕಾರ್ಯದರ್ಶಿ |

### ಸಂಪಾದಕರು

**ಎಲ್.ಎನ್. ಮುಕುಂದರಾಜ್**

ಕನ್ನಡ ಉಪನ್ಯಾಸಕರು

(ಅನ್ಯಕರ್ತವ್ಯದ ಮೇರೆಗೆ)

# ಮುನ್ನುಡಿ

15 ಮೇ 2006

ರಾಷ್ಟ್ರದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ।। ರಾಮಮನೋಹರ ಲೋಹಿಯಾ, ಡಾ।। ಬಿ.ಆರ್. ಅಂಬೇಡ್ಕರ್, ಡಾ।। ಶಾಂಪ್ರಸಾದ್ ಮುಖರ್ಜಿ, ಡಾ।। ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತರಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ|| ಲಂಕಾ ಸುಂದರಂ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

**ಗಂಗಾಧರಯ್ಯ ಹಿರೇಮಠ ಹಾಗೂ ದೇವೇಂದ್ರಗೌಡ ಮಾಲಿ ಪಾಟೀಲ** ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ ಕೊಲೂರು ಮಲ್ಲಪ್ಪ ಅವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ಸಚ್ಚಿದಾನಂದ ಲ. ಖೋತ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಕೃಷ್ಣ
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

ಕರ್ನಾಟಕ ರಾಜ್ಯದ ವಿಧಾನ ಮಂಡಲದ ಸಚಿವಾಲಯವು ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹ ಮಾಲಿಕೆಯ ಅಡಿಯಲ್ಲಿ ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳನ್ನು ಕುರಿತು ಪುಸ್ತಕ ಪ್ರಕಟಿಸಿರುತ್ತಿರುವುದು ಅತ್ಯಂತ ಅಭಿನಂದಾರ್ಹ ಕಾರ್ಯವಾಗಿದೆ. ಈ ಸ್ತುತ್ಯ ಕಾರ್ಯದಿಂದ ಕಡತಗಳಲ್ಲಿಯೇ ಕರಗಿ ಹೋಗಬಹುದಾದ ಪ್ರತಿಭೆಗಳನ್ನು ಹೊರತಂದು ಅವರ ಜೀವನ-ಸಾಧನೆ ಹಾಗೂ ಸಮಾಜದ ಕುರಿತು ಅವರ ಚಿಂತನೆಗಳನ್ನು ಮುಂದಿನ ಜನಾಂಗಕ್ಕೆ ಮಾರ್ಗದರ್ಶನವಾಗಿ ನೀಡಬಹುದಾಗಿದೆ.

ಕರ್ನಾಟಕ ಸರ್ಕಾರವು ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹವನ್ನು ಈಗಾಗಲೇ ಪ್ರಕಟಿಸಿದ್ದು, ಅಂತಹ ಸಾಲಿಗೆ **ಹೈದ್ರಾಬಾದ್ ಕರ್ನಾಟಕದ ಗಾಂಧಿ** ಎಂದೆ ಪ್ರಸಿದ್ಧಿ ಪಡೆದಿರುವ ಶಿಸ್ತಿನ ಸಿಪಾಯಿ, ಶ್ರೀ ಕೊಲೂರು ಮಲ್ಲಪ್ಪ ನವರ ಬದುಕು-ಬರಹಗಳ ಕುರಿತು ಪುಸ್ತಕವು ಸೇರ್ಪಡೆಯಾಗುತ್ತಿರುವುದು ದಾಖಲಾರ್ಹವಾಗಿದೆ. ರಾಜ್ಯದ ಅಂತಹ ಅಪರೂಪದ ರಾಜಕಾರಣಿ, ರಾಜಕೀಯ ಮುತ್ಸದ್ದಿಯನ್ನು ಕುರಿತು ಪುಸ್ತಕ ರಚಿಸುವ ಜವಾಬ್ದಾರಿಯನ್ನು ಕರ್ನಾಟಕ ವಿಧಾನ ಸಭಾ ಸಚಿವಾಲಯದ ಗ್ರಂಥಾಲಯ ಉಪಸಮಿತಿಯು ನಮಗೆ ಒಪ್ಪಿಸಿದ್ದು ಅತ್ಯಂತ ಸಂತೋಷವಾಗಿದೆ.

ಕರ್ನಾಟಕ ರಾಜ್ಯದ ರಾಜಕಾರಣದಲ್ಲಿ ಅಪರೂಪದ ರಾಜಕಾರಣಿಯಾಗಿದ್ದ ಶ್ರೀ ಕೊಲೂರು ಮಲ್ಲಪ್ಪನವರು ಅತ್ಯಂತ ಆತ್ಮವಿಶ್ವಾಸವುಳ್ಳ ಸಕ್ರಿಯ ಹಾಗೂ ಪಕ್ಷನಿಷ್ಠ ವ್ಯಕ್ತಿಯಾಗಿದ್ದರು. ಗಂಭೀರ ಸ್ವಭಾವದ ಕೊಲೂರು ಮಲ್ಲಪ್ಪ 1952ರಲ್ಲಿ ಸುರುಪುರ 1957ರಲ್ಲಿ ಸೇಡಂ ಕ್ಷೇತ್ರದಿಂದ ವಿಧಾನ ಸಭೆಗೆ ಆಯ್ಕೆಯಾಗಿದ್ದರು. 1968-1974, 1974-1980 ಹಾಗೂ 1984-1990ರ ಅವಧಿಯಲ್ಲಿ ಮೂರು ಬಾರಿ ರಾಜ್ಯಸಭಾ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. 1954ರಲ್ಲಿ ಹೈದ್ರಾಬಾದ್ ಸ್ಟೇಟ್ ಕಾಂಗ್ರೇಸ್ ಸಮಿತಿಯ ಅಧ್ಯಕ್ಷರಾಗಿ, ಮೈಸೂರು ಕಾಂಗ್ರೆಸ್ ಸಮಿತಿಯ ಉಪಾಧ್ಯಾಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ. 1935ರಲ್ಲಿ ಅಖಿಲ ಭಾರತ ಕಾಂಗ್ರೆಸ್‌ಗೆ ಸೇರ್ಪಡೆಯಾಗಿ 1947-48ರಲ್ಲಿ ಗುಲ್ಬರ್ಗಾದಲ್ಲಿ ಕಾಂಗ್ರೆಸ್ ಅಧ್ಯಕ್ಷರಾಗಿ ಅಖಿಲ ಭಾರತ ಕಾಂಗ್ರೆಸ್ ವರ್ಕಿಂಗ್ ಕಮಿಟಿ. ಅಖಿಲ ಭಾರತ ಖಾದಿ ಮತ್ತು ಗ್ರಾಮ ಕೈಗಾರಿಕೆ ಬೋರ್ಡು ಹೈದರಾಬಾದ್, ಹಿಂದಿ ಪ್ರಚಾರ ಸಭಾ ಅಖಿಲ ಭಾರತ ಖಾದಿ ಗ್ರಾಮೋದ್ಯೋಗ ಹಾಗೂ ವಿವಿಧ ಸಹಕಾರ ಸಂಘಗಳಿಗೆ ಸದಸ್ಯರಾಗಿ ಅವರು ಮಾಡಿದ ಸೇವೆ ಅನನ್ಯವಾದುದು.

ಈ ಗ್ರಂಥವನ್ನು ಸಿದ್ಧಪಡಿಸುವಲ್ಲಿ ನೆರವಾದ ವಿಧಾನ ಸಭೆಯ ಅಪರ ಕಾರ್ಯದರ್ಶಿಯಾದ ಶ್ರೀ ಎಸ್.ಬಿ. ಪಾಟೀಲರು ಹಾಗೂ ಉಪಕಾರ್ಯದರ್ಶಿಗಳಾದ ಶ್ರೀ ಬಸವರಾಜು, ಅಧೀನ ಕಾರ್ಯದರ್ಶಿಗಳಾದ ಕೆ.ನೂರ್ ಮಹಮ್ಮದ್, ಸಂಶೋಧನಾ ವಿಭಾಗದ ಅಧಿಕಾರಿಗಳಾದ ಶ್ರೀಮತಿ ವಸಂತಕುಮಾರಿ ಹಾಗೂ ಗ್ರಂಥಾಲಯ ಉಪಸಮಿತಿಯ ಶಾಖಾಧಿಕಾರಿಗಳಾದ ಶ್ರೀ ಎನ್. ನರಸಿಂಹಮೂರ್ತಿ ಅವರನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇವೆ.

ಕರ್ನಾಟಕ ವಿಧಾನ ಪರಿಷತ್ತಿನ ಮಾನ್ಯ ಸಭಾಪತಿಗಳಾದ ಶ್ರೀ ವಿ.ಆರ್. ಸುದರ್ಶನ್ ಅವರಿಗೆ ಗ್ರಂಥಾಲಯ ಉಪ ಸಮಿತಿಯ ಚೇರ್ಮನರಾದ ಶ್ರೀ ವಿಶ್ವನಾಥ ಪಾಟೀಲ ಹೆಬ್ಬಾಳ, ಸದಸ್ಯರಾದ ಡಾ|| ವೀರಬಸವಂತರೆಡ್ಡಿ, ಡಾ|| ಚಂದ್ರಶೇಖರ ಕಂಬಾರ, ಶ್ರೀ ಮುಖ್ಯಮಂತ್ರಿ ಚಂದ್ರು, ಜಿ.ಎಸ್. ಗಡ್ಡದೇವರಮಠ, ಆರ್. ಧ್ರುವನಾರಾಯಣ, ಶ್ರೀ ಕಳಕಪ್ಪಬಂಡಿ, ಶ್ರೀಮತಿ ಉಮಾಶ್ರೀ ಅವರಿಗೂ ಈ ಕೃತಿ ಅಂದವಾಗಿ ಹೊರಬರಲು. ಹಸ್ತ ಪ್ರತಿಯನ್ನು ಪರಿಶೀಲಿಸಿ ಸಲಹೆ ಸೂಚನೆಯನ್ನು ನೀಡಿದ ಶ್ರೀ ಎಲ್.ಎನ್. ಮುಕುಂದರಾಜ್ ಅವರಿಗೂ ಈ ಸಂದರ್ಭದಲ್ಲಿ ಸ್ಮರಿಸುತ್ತೇವೆ.

ನನ್ನ ಕಾರ್ಯಗಳಿಗೆ ಸದಾ ಸಹಕರಿಸಿ ಬೆಂಬಲಿಸಿರುವ ಶ್ರೀ ದಯಾನಂದ ತುಳಸಿಗೇರಿ, ವಿ. ಮಂಜುನಾಥ್, ಎ.ಎನ್. ಮುನಿರಾಜು ಹಾಗೂ ಕುಮಾರಿ ಸವಿತಾ ಅವರನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇವೆ. ಕೊಲೂರು ಮಲ್ಲಪ್ಪನವರ ಭಾಷಣಗಳನ್ನು ಉರ್ದುದಿಂದ ಕನ್ನಡಕ್ಕೆ ಭಾಷಾಂತರ ಮಾಡುವಲ್ಲಿ ಸಹಕರಿಸಿದ ಶಹಾಪುರದ ಮಮ್ತಾಜ್ ಅವರನ್ನು ಹಾಗೂ ವಿಶೇಷವಾಗಿ ಎಸ್. ನಿಜಲಿಂಗಪ್ಪನವರ ಕುರಿತು ಕೊಲೂರು ನೀಡಿದ ಸಂದರ್ಶನದ ಮಾಹಿತಿಯನ್ನು ಖ್ಯಾತ ಕವಯತ್ರಿ ಹಾಗೂ ಮುಖ್ಯಮಂತ್ರಿಗಳ ವಿಶೇಷಾಧಿಕಾರಿಯಾದ ಡಾ|| ಟಿ.ಸಿ. ಪೂರ್ಣಿಮಾ ಅವರನ್ನು ಪುಸ್ತಕದ ಡಿ.ಟಿ.ಪಿ. ಕಾರ್ಯಪೂರ್ಣಗೊಳಿಸಿದ ಬಿ.ಎಂ. ರವಿಕುಮಾರ್, ಬಲರಾಮ್, ಕುಮಾರಿ ಶಶಿಕಲಾ ಹಾಗೂ ಕುಮಾರಿ ಪವಿತ್ರ ಪ್ರಿಯಾ ರವರನ್ನು ಮರೆಯದೆ ಇರಲಾರೆವು.

- ಗಂಗಾಧರಯ್ಯ ಹಿರೇಮಠ

- ಡಾ:ದೇವೇಂದ್ರಪ್ಪಗೌಡ ಮಾ.ಪಾ.

# ಪರಿಚಯ


ಮುನ್ನುಡಿ V
ಲೇಖಕರ ಮಾತು VII


## ಭಾಗ-1
## ಮಲ್ಲಪ್ಪನವರ ಸಂಕ್ಷಿಪ್ತ ಜೀವನ ಪರಿಚಯ


- ಹಿನ್ನೆಲೆ - 03
- ಕೊಲೂರು ಮೂಲವಲ್ಲ! - 06
- ಸರಳ ಜೀವನದ ಮಾತಾಪಿತೃ - 06
- ಮೊದಲನೆಯ ಮಗನ ಜನನ - 07
- ಕೃಷಿಕ ಕುಟುಂಬ - 07
- ಶಿಕ್ಷಣ ಕಲಿತು ನಿನ್ನ ಮಗ ಏನು ಸಾಧಿಸಬೇಕು? - 09
- ತಂದೆಯ ಪ್ರೇರಣೆ - 10
- ಸಾರ್ವಜನಿಕ ಸೇವೆಗೆ ಪಾದಾರ್ಪಣೆ - 11
- ದಾಂಪತ್ಯದ ರಸ ಘಳಿಗೆ - 13
- ವಿದ್ಯೆಗೆ ಮಹತ್ವ ನೀಡಿದ ಅನಕ್ಷರಸ್ಥ ಮಡದಿ - 15
- ಮಲ್ಲಪ್ಪನವರ ಬದುಕಿನ ಸವಾಲು, ಸಂದೇಶಗಳು - 18
- ಸವಾಲು ಸಂದೇಶ - 22
- ಧಾರ್ಮಿಕ ನಂಬಿಕೆ - 28
- ಯುವಜನತೆಗೆ ಸಂದೇಶ - 30
- ಪ್ರಕೃತಿ ಪ್ರೇಮ - 33
- ಶೈಕ್ಷಣಿಕ ವಿಚಾರಗಳು - 34

## ಭಾಗ-2
## ಸ್ವತಂತ್ರ ಹೋರಾಟದಲ್ಲಿ ಕೊಲ್ಲೂರು ಮಲ್ಲಪ್ಪನವರ ಪಾತ್ರ


- ಗಾಂಧೀಜಿಯವರ ದರ್ಶನ - 41
- ಹೈದ್ರಾಬಾದ್ ವಿಮೋಚನೆಗೆ ಹೋರಾಟ - 42


## ಭಾಗ-3
## ರಾಜಕಾರಣ ಮತ್ತು ರಚನಾತ್ಮಕ ಕಾರ್ಯಗಳು


- ಶಾಸಕರಾಗಿ ಸೇವೆ - 61
- ಅಧ್ಯಕ್ಷರಾಗಿ ಸೇವೆ - 62
- ಶಾಸಕನಾಗಿ ಮರು ಆಯ್ಕೆ - 66
- ರಾಜ್ಯಸಭಾ ಸದಸ್ಯರಾಗಿ ನೇಮಕ - 67
- ಖಾದಿ ಉಣ್ಣೆ ಕೈಗಾರಿಕೆಗಳು - 70
- ಭೂ ಸುಧಾರಣೆಗಳು - 71
- ಗಾಂಧೀ ತತ್ವ ಪರಿಪಾಲನೆ - 72
- ಕುಷ್ಠ ರೋಗಿಗಳಿಗಾಗಿ ಅವರ ಸೇವೆ - 75


## ಭಾಗ-4
## ಶಾಸನ ಸಭೆಯಲ್ಲಿ ಮಲ್ಲಪ್ಪನವರ ವಿಚಾರಗಳು


- ಬಜೆಟ್ ಮೇಲಿನ ಸಾಮಾನ್ಯ ಚರ್ಚೆ - 83
- ಅರಣ್ಯ ಇಲಾಖೆ ಕುರಿತು - 84
- ಗುಡಿ ಕೈಗಾರಿಕೆ ಕುರಿತು - 84
- ಸರ್ಕಾರೇತರ ಗೊತ್ತುವಳಿ ಮೇಲಿನ ಚರ್ಚೆ - 86
- ಧರ್ಮ ಸಾಗರ ಗ್ರಾಮದಲ್ಲಿ ನಡೆದ ಅಹಿತಕರ ಘಟನೆ - 88

- ಪೋಲಿಸ್ ಆ್ಯಕ್ಷನ್ ಕುರಿತು - 90
- ಮೈಸೂರು ಅಪ್ರೋಪ್ರಿಯೇಷನ್ ಮಸೂದೆ - 93
- ಮೈಸೂರು ಟೆನೆನ್ಸಿ ಅಗ್ರಿಕಲ್ಚರ್ ಲ್ಯಾಂಡ್ ಲಾ ಕಮಿಟಿ - 95
- ಬಾಂಬೆ ಮತ್ತು ಮೈಸೂರು ಗಡಿ ಹೊಂದಾಣಿಕೆ - 97
- ಅಂತರ್ ರಾಜ್ಯ ನೀರು ವಿವಾದ ಮಸೂದೆ - 104

## ಭಾಗ-5

## ಗಣ್ಯರ ದೃಷ್ಟಿಯಲ್ಲಿ ಕೊಲೂರು ಮಲ್ಲಪ್ಪನವರು

- ನನ್ನ ರಾಜಕೀಯ ಗುರು - ಎನ್. ಧರ್ಮಸಿಂಗ್ - 109
- ರಾಜಕೀಯ ಮುತ್ಸದ್ದಿ ಮಲ್ಲಪ್ಪನವರು
  - ಶರಣಬಸಪ್ಪಗೌಡ ದರ್ಶನಾಪೂರ - 110
- ಕಟ್ಟಾ ಗಾಂಧೀವಾದಿ - ಟಿ.ಎಂ. ಹುಂಡೇಕಾರ - 111
- ರಾಷ್ಟ್ರಮಟ್ಟದಲ್ಲೂ ಕಾಣಿಸಿಕೊಂಡ ಗಟ್ಟಿ ನಾಯಕ
  - ಲಿಂಗಣ್ಣ ಸತ್ಯಂಪೇಟೆ - 112
- ದಕ್ಷ ನೇತಾರ - ಭೀಮಸೇನರಾವ್ ಇಮಾರತ್ - 113
- ಸ್ವಾತಂತ್ರ್ಯ ಸೇನಾನಿ - ನರಸಪ್ಪಗೌಡ ದರಿಯಾಪೂರ - 114
- ಗಾಂಧೀ ತತ್ವ ಪರಿಪಾಲಕ - ಜಗದೇವಪ್ಪ ಹಾಲಭಾವಿ - 115
- ಮಾನವತಾವಾದಿ - ವೆಂಕಣ್ಣಗೌಡ ಮಾಲಿ ಪಾಟೀಲ - 117
- ಹೈದ್ರಾಬಾದ್ ಕರ್ನಾಟಕ ಗಾಂಧಿ - ಮಲ್ಲಣ್ಣ ಅಂಬಿಗೇರ - 118
- ಧರ್ಮಕ್ಕೆ ಜಯವೆಂದ ದಿವ್ಯ ವ್ಯಕ್ತಿ ಗೆಳೆಯ
  ಎಸ್. ನಿಜಲಿಂಗಪ್ಪ ಕುರಿತು ಕೊಲೂರು - 121

## ಭಾಗ-6

ಭಾವಚಿತ್ರಗಳಲ್ಲಿ ಕೊಲೂರು ಮಲ್ಲಪ್ಪ - 123

ಪರಮ ಪದವಿಯ ನಿಮ್ಮ ಕೊರಳಲ್ಲಿ ಕಟ್ಟಿಕೊಳ್ಳಿ.
ಪರಮ ಪದವಿಯ ನಿಮ್ಮ ತಲೆಯಲ್ಲಿ ಸುತ್ತಿಕೊಳ್ಳಿ.
ಎನಗೆ ನಿಮ್ಮ ತೊತ್ತು ಸೇವೆಯೇ ಸಾಕು,
ಮಹಾಲಿಂಗ ಗಜೇಶ್ವರ ದೇವಾ
ಪರಮ ಪದವಿಯ ನಿಮ್ಮ ಎದೆಯಲ್ಲಿ ಇರಿಸಿ ಕೊಳ್ಳಿ.

- ಗಜೇಶ ಮಸಣಯ್ಯ

## ಹಿನ್ನೆಲೆ:

ಮಹಾಪುರುಷರು ಅತ್ಯಂತ ವಿಶಿಷ್ಟವಾದ ಶಕ್ತಿ ಸಾಮರ್ಥ್ಯವನ್ನು, ಅಸಾಮಾನ್ಯವಾದ ಬೌದ್ಧಿಕ ಕೌಶಲ್ಯವನ್ನು, ಅಸಾಧಾರಣ ನೈಪುಣ್ಯವನ್ನು ಹೊಂದಿದವರಾಗಿರುತ್ತಾರೆ. ತಮ್ಮ ಕಾಲದ ಸಮಾಜ ಹಾಗೂ ರಾಷ್ಟ್ರ ಎದುರಿಸುತ್ತಿರುವ ಸಮಸ್ಯೆಗಳಿಗೆ ಸಮರ್ಥವಾಗಿ ಹಾಗೂ ಸಮಯಾನುಸಾರವಾಗಿ ಸ್ಪಂದಿಸುವ ಮೂಲಕ ಅವರು ಚಲನಶೀಲ ವ್ಯಕ್ತಿತ್ವವನ್ನು ಪಡೆದುಕೊಳ್ಳುತ್ತಾರೆ.

ಆಧುನಿಕ ಭಾರತದ ಸಂದರ್ಭದಲ್ಲಿ ಬ್ರಿಟಿಷ್ ಸಾಮ್ರಾಜ್ಯವಾದವು, ನಮ್ಮವರಿಗೆ ಸವಾಲಾಗಿ ಪರಿಣಮಿಸಿ ಸ್ವಾತಂತ್ರ್ಯ ಸಂಗ್ರಾಮದ ರೂಪದಲ್ಲಿ ಸಮಗ್ರ ರಾಷ್ಟ್ರೀಯ ಸ್ಪಂದನಕ್ಕೆ ಅವಕಾಶ ಕಲ್ಪಿಸಿಕೊಟ್ಟಿತು. ಇಂತಹ ಸಾಮೂಹಿಕ ಸ್ಪಂದನವು ಅನೇಕ ರಾಷ್ಟ್ರೀಯ ಹಾಗೂ ಪ್ರಾದೇಶಿಕ ಮಟ್ಟದ ನೇತಾರರಿಗೆ ಜನ್ಮವಿತ್ತಿತ್ತು. ದಾದಾಬಾಯಿ ನವರೋಜಿ, ಲೋಕಮಾನ್ಯ ತಿಲಕ ಗೋಪಾಲಕೃಷ್ಣ ಗೋಖಲೆ, ಲಾಲ ಲಜಪತರಾಯ, ವೀರಸಾವರಕರ, ಅರವಿಂದ ಘೋಷ, ಎಂ.ಜಿ. ರಾನಡೆ, ಬಿಪಿನ್‌ಚಂದ್ರಪಾಲ, ವಲ್ಲಭಬಾಯಿ ಪಟೇಲ, ಮಹಾತ್ಮಗಾಂಧೀಜಿ ಚಂದ್ರಶೇಖರ ಆಜಾದ್, ಭಗತ್‌ಸಿಂಗ್, ಸುಭಾಷ್‌ಚಂದ್ರಬೋಸ್, ನೆಹರು ಮತ್ತು ಅಂಬೇಡ್ಕರ್ ಮುಂತಾದ ಧೀರೋದಾತ್ತ ವ್ಯಕ್ತಿಗಳು ರಾಷ್ಟ್ರೀಯ ಮಟ್ಟದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಚುಕ್ಕಾಣಿಯನ್ನು ಹಿಡಿದು ಮಾರ್ಗದರ್ಶನವಿತ್ತರು.

ಇವರಂತೆ ಹರ್ಡೇಕರ್ ಮಂಜಪ್ಪ ಡಿ.ಬಿ. ಕಲ್ಮಣಕರ್, ಹಣಮಂತರಾಯ ಕೌಜಲಗಿ, ಚೆನ್ನಬಸಪ್ಪ ಅಂಬಲಿ, ಹಳ್ಳಿಕೇರಿ ಗುದ್ಲೆಪ್ಪ, ಆರ್.ಆರ್. ದಿವಾಕರ್ ಮತ್ತು ಗಂಗಾಧರರಾವ್ ದೇಶಪಾಂಡೆ ಮುಂತಾದವರು ಅಗ್ರಗಣ್ಯರು. ಇವರು ರಾಜ್ಯಮಟ್ಟದಲ್ಲಿ ಮುಂಚೂಣಿಯಲ್ಲಿ ನಿಂತು ಸ್ವಾತಂತ್ರ್ಯ ಸಂಗ್ರಾಮದ ರಾಷ್ಟ್ರೀಯ ರಥವನ್ನು ಎಳೆಯುವಲ್ಲಿ ರಾಷ್ಟ್ರಮಟ್ಟದ ನೇತಾರರಿಗೆ ಸಹಾಯಕರಾದರು. ಈ ರೀತಿ ಸ್ವಾತಂತ್ರ್ಯ ಹೋರಾಟದಲ್ಲಿ ಅದ್ಭುತ ಪ್ರತಿಭೆ, ಅದಮ್ಯ ಚೇತನ ಹೊಂದಿ, ಅನುಪಮ ಸೇವೆ ಸಲ್ಲಿಸಿದವರಲ್ಲಿ ಕೊಲೂರು ಮಲ್ಲಪ್ಪ ಒಬ್ಬರು.

ಕೊಲೂರು ಮಲ್ಲಪ್ಪನವರು ತಾವು ಬಾಳಿ ಬದುಕುತ್ತಿರುವ ಸಮುದಾಯವನ್ನು ಎಚ್ಚರಿಸಿ ಅವರ ನೋವು-ನಲಿವುಗಳಿಗೆ ಸ್ಪಂದಿಸಿ ಸಾಧಿಸಿದ ಸಾಧನೆಗಳೂ ಗಮನಾರ್ಹ. ಅವರ ಪ್ರಗತಿ ಒಂದು ವಿಶಾಲ ವರ್ಣಚಿತ್ರದಂತೆ ನಮ್ಮ ಕಣ್ಮುಂದೆ ನಿಲ್ಲುತ್ತದೆ ಎಂಬುದನ್ನು ನಾವ್ಯಾರೂ ಮರೆಯುವಂತಿಲ್ಲ. ಕೊಲೂರು ಮಲ್ಲಪ್ಪನವರ ಬಹುಮುಖ ಪ್ರತಿಭೆ ಹಾಗೂ ಉನ್ನತ ವ್ಯಕ್ತಿತ್ವವನ್ನು ಶಬ್ದಗಳಲ್ಲಿ ಸೆರೆ ಹಿಡಿಯುವುದು ಅತ್ಯಂತ ಕ್ಲಿಷ್ಟಕರವಾದ ಕಾರ್ಯ. ತಮ್ಮ ವಿನಯಶೀಲ ಗುಣದಿಂದಾಗಿ ಪ್ರಚಾರದ ಬೆನ್ನು ಹತ್ತದೆ ಎಲೆಮರೆಯ ಕಾಯಿಯಂತೆ ಸಮಾಜ ಸೇವೆ ಮಾಡಿದ್ದು ಅಧ್ಯಯನಾರ್ಹವಾಗಿದೆ.

ಅವರ ಅಗಾಧವಾದ ಪ್ರತಿಭೆಯು ಅಪಾರವಾದ ಅನುಭವ ಹಾಗೂ ಅಪ್ರತಿಮ ಕರ್ತೃತ್ವ ಶಕ್ತಿಯನ್ನು ಹೊಂದಿ ಸಮಾಜ ಹಾಗೂ ರಾಷ್ಟ್ರಕ್ಕೆ ವೈವಿಧ್ಯ ಪೂರ್ಣ ಸೇವೆಯನ್ನು ಸಲ್ಲಿಸಿತು. ಅವರು ಎಂದೂ ಅಧಿಕಾರಕ್ಕೆ ಪ್ರಯತ್ನಿಸಿದವರಲ್ಲ. ಆದ್ದರಿಂದ ಅವರ ಜೀವನ ವೃತ್ತಾಂತವನ್ನು ಚಿಂತಕರು. ಸಂಶೋಧಕರು ಹಾಗೂ ಶೈಕ್ಷಣಿಕ ಸಂಸ್ಥೆಗಳು ಆಳವಾಗಿ ಅಧ್ಯಯನ ಮಾಡಬೇಕಾಗಿದೆ. ಅವರ ನಿಸ್ವಾರ್ಥ ಸೇವೆಯನ್ನು ಗುರುತಿಸಿ. ಅವರ ವ್ಯಕ್ತಿತ್ವದ ಔದಾರ್ಯತೆ ಹಾಗೂ ಆದರ್ಶಗಳನ್ನು ಸೆರೆಹಿಡಿದಿಟ್ಟು ಮುಂದಿನ ತಲೆಮಾರಿನರಿಗೆ ಒಪ್ಪಗಿಸಿಕೊಡುವುದು ನೈತಿಕ ಹೊಣೆಯಾಗಿದೆ. ಈ ಒಂದು ಉದ್ದೇಶದಿಂದ ಕೊಲೂರು ಮಲ್ಲಪ್ಪನವರ ವ್ಯಕ್ತಿತ್ವವನ್ನು ನಿರೂಪಿಸಿ ಅವರ ತತ್ವದರ್ಶನ ಹಾಗೂ ಸಾಧನೆಗಳು ಮುಂದಿನ ತಲೆಮಾರಿನವರಿಗೆ ಉಪಲಬ್ಧವಾಗುವ ರೀತಿಯಲ್ಲಿ ಕಾಯ್ದಿಡುವ ಒಂದು ಪುಟ್ಟ ಪ್ರಯತ್ನವನ್ನು ಪ್ರಸ್ತುತ ಕೃತಿಯು ಮೂಲಕ ಕೈಗೊಳ್ಳಲಾಗಿದೆ.

ಕರ್ನಾಟಕದ ಮಟ್ಟಿಗೆ ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆಯೆಂದರೆ ತಕ್ಷಣವೇ ನಮಗೆ ನೆನಪಿಗೆ ಬರುವ ಬಹು ಮುಖ್ಯ ಹೆಸರು ಕೊಲೂರು ಮಲ್ಲಪ್ಪನವರದು. ಮಹಾತ್ಮ ಗಾಂಧೀಜಿಯವರ ಮಾರ್ಗದರ್ಶನದಲ್ಲಿ ರಾಜ್ಯ ಮಟ್ಟದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ರಥವನ್ನೆಳೆದ ಮಲ್ಲಪ್ಪನವರು ಉಂಡ ನೋವು ಹೇಳಲು ಅಸಾಧ್ಯ. ಗಾಂಧೀಜಿಯವರ ತತ್ವಗಳನ್ನು ಚಾಚು ತಪ್ಪದೆ ಅನುಸರಿಸಿಕೊಂಡು ಬಂದ ಅವರು ಸತ್ಪುರುಷರು ಮಾತ್ರವಲ್ಲ, ನಮ್ಮ ನಾಡು ಕಂಡ ಧೀಮಂತ ಪುತ್ರರು.

ಇವರೊಬ್ಬ ನಿಷ್ಠಾವಂತ ರಾಜಕಾರಣಿಯಾಗಿದ್ದು ಈ ಹಿಂದೆ ಸ್ವಾತಂತ್ರ್ಯ ಹೋರಾಟದಿಂದ ಹಿಡಿದು ಕರ್ನಾಟಕದ ಏಕೀಕರಣದವರೆಗೆ ಅವರ ಹೋರಾಟದ ಬದುಕು ಅವಿಸ್ಮರಣೀಯವಾದುದು. ಹೈದ್ರಾಬಾದ್ ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಅವರದು ಪ್ರಧಾನ ಪಾತ್ರ. ಅವರ ಜೀವನ ಸಾಧನೆಯೇ ಒಂದು ಉಜ್ವಲ ಅಧ್ಯಾಯವಾಗಿದೆ. ಹೋರಾಟಗಾರರಾಗಿ ಅಪ್ಪಟ ಗಾಂಧಿವಾದಿಯಾಗಿ ಶ್ರೀ ಮಲ್ಲಪ್ಪನವರು ರಾಷ್ಟ್ರದ ಆಗು ಹೋಗುಗಳ ಬಗ್ಗೆ ಕಳಕಳಿಯಿಂದ ಚಿಂತಿಸಿದ್ದಾರೆ. ದುಡಿದಿದ್ದಾರೆ. ಅವರು ಇಂದಿನ ಸಮಕಾಲೀನ ಯುವ ಪೀಳಿಗೆಗೆ ಆದರಣೀಯ. ಆದರ್ಶ ಮಾರ್ಗದರ್ಶಕರೂ ಎಂಬುದು ಸತ್ಯದ ಮಾತಾಗಿದೆ.

ಸತ್ಯಸಂಧತೆ, ವೈಜ್ಞಾನಿಕ ಮನೋವೃತ್ತಿ, ಹೃದಯ ವಂತಿಕೆ ಮತ್ತು ಮಾನವೀಯತೆ ಅವರಲ್ಲಿರುವ ಪ್ರಧಾನ ಗುಣಗಳು. ಅವರು ಸಾಧಾರಣ ವ್ಯಕ್ತಿಯಂತೆ ಕಂಡು ಬಂದರೂ ಅವರಲ್ಲಿ ಅಪಾರ ಚೇತನ ಶಕ್ತಿ ಹುದುಗಿತ್ತು. ಆಕರ್ಷಕ ವ್ಯಕ್ತಿತ್ವ ಹೊಂದಿರುವ ಅವರು ಜನ ಮನಕ್ಕೆ ಸ್ಫೂರ್ತಿಯ ಚಿಲುಮೆಯಂತಿದ್ದರು. ಮಾನವನ ಬುದ್ಧಿಶಕ್ತಿಯಲ್ಲಿ ಅವರಿಗೆ ಅಪಾರ ನಂಬಿಕೆ, ಪರಮಾತ್ಮನನ್ನು ನಂಬಿ ಜೀವನದ ಸುಖ-ದುಃಖಗಳನ್ನು ಸಮನಾಗಿ ಎದುರಿಸಿದ ಮಹಾನುಭಾವರು ಅವರು. ಮಾನವನ ಸರ್ವತೋಮುಖ ಏಳಿಗೆಗಾಗಿ ತಮ್ಮನ್ನು ಭಾರತ ಮಾತೆಯ ಅಡಿಯಲ್ಲಿ ಅರ್ಪಿಸಿಕೊಂಡಿದ್ದಾರೆ. ಅವರನ್ನು ಕಂಡರೆ ಸಂಪ್ರದಾಯ ವಾದಿಗಳಿಗೆ, ಡಾಂಭಿಕರಿಗೆ ಒಂದು ರೀತಿಯ ಮುಜುಗರವಾಗುತ್ತಿತ್ತು.

ಬುದ್ಧ, ಬಸವ, ಮಹಾತ್ಮಗಾಂಧೀಜಿ ಹಾಗೂ ಜ್ಯೋತಿಬಾಫುಲೆಯವರ ಆದರ್ಶ ವಿಚಾರಗಳಿಂದ ಸುತ್ತಲ್ಪಟ್ಟ ಒಂದು ಉಂಡೆಯೇ ಕೊಲೂರು ಮಲ್ಲಪ್ಪನವರು. ಅವರು ಕೇವಲ ವ್ಯಕ್ತಿಯಾಗಿರದೆ ಒಂದು ಶಕ್ತಿಯಾಗಿ ಬದುಕಿದ್ದಾರೆ. ಒಂದು ಅರ್ಥದಲ್ಲಿ ಅವರ ವೈಯಕ್ತಿಕ ಜೀವನ ಸಾಧೆಯೆಲ್ಲವೂ ಸಾರ್ವಜನಿಕವೇ ಆಗಿದೆ. ಅವರು ತಮಗಾಗಿ ಹಾಗೂ ತಮ್ಮ ಕುಟುಂಬಕ್ಕಾಗಿ ಸೇವೆ ಸಲ್ಲಿಸುವುದಕ್ಕಿಂತ ಸಾರ್ವಜನಿಕರ ಅಭಿವೃದ್ಧಿಗಾಗಿ ಸೇವೆ ಸಲ್ಲಿಸಿದ್ದೇ ಹೆಚ್ಚು.

ಈ ಉದ್ದೇಶದಿಂದ ಇಂಥ ಒಬ್ಬ ಗಾಂಧಿವಾದಿ ಹೋರಾಟಗಾರರ ಜೀವನ ಸಾಧನೆ ತಿಳಿದುಕೊಳ್ಳುವುದು ಅತಿ ಅವಶ್ಯವಾಗಿದೆ. ಯಾವುದೇ ಪ್ರದೇಶ ಅಥವಾ ರಾಷ್ಟ್ರ ಅಭಿವೃದ್ಧಿಯಾಗಬೇಕಾಗಿದೆಯೋ ಅಂಥವರು ಅವಶ್ಯವಾಗಿ ಅವರ ಜೀವನ ಸಾಧನೆಯ ಪುಟಗಳನ್ನೇ ಒಂದೊಂದಾಗಿ ಬಿಚ್ಚಿನೋಡುವುದು ಅನಿವಾರ್ಯವಾಗಿದೆ. ಅವರ ಜೀವನ ಚರಿತ್ರೆ ವ್ಯಕ್ತಿ ಚಿತ್ರಣದ ಜೊತೆಗೆ ಸಮಕಾಲೀನ ಭಾರತ ಸಾತಂತ್ರ್ಯ ಹೋರಾಟ ಮತ್ತು ಹೈದ್ರಾಬಾದ್ ವಿಮೋಚನಾ ಚಳುವಳಿಯ ಮಗ್ಗಲುಗಳನ್ನು ಅರ್ಥ ಮಾಡಿಕೊಡುವುದಾಗಿದೆ.

ಈ ದೇಶ ಈ ನಾಡು ಕಳೆದ 50 ವರ್ಷಗಳಲ್ಲಿ ಯಾವ ಪಥದಲ್ಲಿ ಹೊರಟಿದೆ? ಯಾವ ಆಯಾಮಗಳನ್ನು ಪಡೆದಿದೆ? ಯಾವ ಸಾಧನೆಯ ಹಂತದಲ್ಲಿದೆ? ಎನ್ನುವುದರ ಒಟ್ಟು ಅಧ್ಯಯನವನ್ನು ಕೊಲೂರು ಮಲ್ಲಪ್ಪನವರ ವಿಚಾರದಲ್ಲಿ ನೋಡಬಹುದಾಗಿದೆ. ಅವರು ವ್ಯಕ್ತಿಯಾಗಿ, ಒಂದು ಶಕ್ತಿಯಾಗಿ ಸೇವೆ ಸಲ್ಲಿಸುವ ಸಮಕಾಲೀನ ಸಂದರ್ಭದಲ್ಲಿ ಜೀವಂತ ಆಧಾರವಾಗಿದ್ದಾರೆ. ಈ ದೃಷ್ಟಿಕೋನದಿಂದ ಇಂತಹ ಒಂದು ಅಪೂರ್ವ ವ್ಯಕ್ತಿಯನ್ನು ರಾಜ್ಯದ ಸಮಸ್ತ ನಾಗರಿಕರಿಗೆ ಪರಿಚಿಸುವುದು ನಮ್ಮ ಕರ್ತವ್ಯ ಮತ್ತು ಬಯಕೆಯಾಗಿದೆ.

ಇಂದಿನ ಪೀಳಿಗೆ ಅವರ ಬಡಿದೆಬ್ಬಿಸುವ ರೋಮಾಂಚಕ ಅನುಭವಗಳನ್ನು ಮೆಲಕು ಹಾಕಬೇಕೆನ್ನುವುದೇ ಈ ಪ್ರಸ್ತುತ ಕೃತಿಯ ಉದ್ದೇಶವಾಗಿದೆ. ಆದ್ದರಿಂದ ಇವರನ್ನು ಕುರಿತು ಅಧ್ಯಯನ ಮಾಡಿ ನಮಗೆ ದೊರಕಿರುವಷ್ಟು ಮಾಹಿತಿಯನ್ನು ಈ ಕೃತಿಯ ಮೂಲಕ ತಮ್ಮ ಮುಂದೆ ಇಡಲಾಗಿದೆ.

ಲಿಂಗಪ್ಪ ಭೀಮವ್ವ ದಂಪತಿಗಳು ಗ್ರಾಮದ ಇತರ ಕುಟುಂಬಗಳಿಗೆ ಮಾದರಿಯಾಗಿದ್ದರು. ಇವರಿಗೆ ಮಲ್ಲಪ್ಪ ಹಿರಿಯ ಮಗನಾಗಿದ್ದರೆ ಶ್ರೀ ಈಶ್ವರ್ ಚಂದ್ರ ಎರಡನೆಯ ಮಗನಾಗಿದ್ದರು. ಈ ದಂಪತಿಗಳಿಗೆ ಹಿರಿಯ ಮಗನಾಗಿ ಜನಿಸಿದ ಮಲ್ಲಪ್ಪ ತಮ್ಮ ವ್ಯಕ್ತಿತ್ವದ ಫಲಶ್ರುತಿಯಿಂದಾಗಿ ಇಂದು ಗಾಂಧಿವಾದಿ ಎಂದು ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಅಷ್ಟೇ ಅಲ್ಲ ನಮ್ಮ ಕನ್ನಡ ನಾಡಿನಲ್ಲಿ ತಮ್ಮ ಹೆಸರನ್ನು ಅಜರಾಮರವಾಗಿ ಉಳಿಸಿಕೊಂಡಿದ್ದಾರೆ.

## ಮೊದಲನೆಯ ಮಗನ ಜನನ

ಮಲ್ಲಪ್ಪ 1905ರಲ್ಲಿ ತಾಯಿಯ ತವರು ಮನೆಯಾದ ಪೊಗಲಾಪುರದಲ್ಲಿ ಜನಿಸಿದರು. ಲಿಂಗಪ್ಪ ಭೀಮವ್ವರ ಆನಂದಕ್ಕೆ ಕೊನೆಯೇ ಇರಲಿಲ್ಲ. ಅಜ್ಜ ಭೀಮಣ್ಣನವರು ಶ್ರೀ ಮೈಲಾರದ ಮಲ್ಲಯ್ಯನ ಹೆಸರನ್ನು ಇಡಲು ಸೂಚಿಸಿದರು. ಆ ದೇವರ ಹೆಸರು ಎಷ್ಟು ಪ್ರಸಿದ್ಧಿ ಪಡೆದಿದೆಯೋ, ಅಷ್ಟೇ ಮೊಮ್ಮಗ ಮುಂದೆ ಕೀರ್ತಿ ಪಡೆಯಲಿ ಎಂಬುದು ಅವರ ಮನದಾಳದ ಬಯಕೆಯಾಗಿದ್ದರಿಂದ ಹೆಸರು ಇಡಲು ಸೂಚಿಸಿದರಂತೆ. ಕುಟುಂಬದ ಮೊದಲನೆಯ ಮಗನಾಗಿ ಅವರು ಜನಿಸಿದ್ದರಿಂದ ಆ ಕುಟುಂಬದ ಸಕ್ಕಾಗ ತಂದೆಯವರಿಂದ ಬಹಳಷ್ಟು ಪ್ರಭಾವಿತರಾದರು.

## ಕೃಷಿಕ ಕುಟುಂಬ

ಲಿಂಗಪ್ಪನವರ ಮನೆತನವು ಹಾಲುಮತ (ಕುರುಬ) ಪರಂಪರೆಗೆ ಸೇರಿತ್ತು. ಅಂದರೆ ಕುರಿಗಾಯಿ ವ್ಯವಸಾಯವೇ ಈ ಮನೆತನದ ಪಾರಂಪರಿಕ ಉದ್ಯೋಗವಾಗಿತ್ತು. ಕುರಿಗಾಯಿ ವ್ಯವಸಾಯದೊಂದಿಗೆ ಕೃಷಿಯನ್ನು ಆಧರಿಸಿದ ಈ ಮನೆತನವು ಮಧ್ಯಮ ವರ್ಗದ ಸ್ಥಿತಿಗತಿಗಳನ್ನು ಹೊಂದಿ ಸಂತೃಪ್ತಿಯ ಜೀವನವನ್ನು ನಡೆಸಿಕೊಂಡು ಬಂದ ಪ್ರಗತಿಪರ ಕೃಷಿಕ ಕುಟುಂಬವಾಗಿತ್ತು. ಈ ಹಾಲುಮತ ಪರಂಪರೆಗೆ ಸೇರಿದ್ದ ಜನಾಂಗವನ್ನು ಕುರುಬ ಜನಾಂಗದವರೆಂದು ಕರ್ನಾಟಕದಲ್ಲಿ ಪರಿಗಣಿಸಲಾಗುತ್ತದೆ.

ಈ ಜನಾಂಗವು ಶೌರ್ಯ ಸಾಹಸಗಳಿಗೆ ಹೆಸರುವಾಸಿಯಾಗಿದೆ. ಸಾಮಾನ್ಯವಾಗಿ ಈ ಸಮುದಾಯದ ಜನತೆ ಬೀರೇಶ್ವರ, ಮೈಲಾರಲಿಂಗ ಮತ್ತು ಮಾಳಿಂಗರಾಯ ಮುಂತಾದ ದೇವತೆಗಳನ್ನು ಆರಾಧಿಸುತ್ತಾರೆ. ಕೊಲ್ಲೂರಿನ ಬೀರಪ್ಪ ದೇವರು ಮಲ್ಲಪ್ಪನವರ ಪೂರ್ವಜರ ಕುಲದೈವವಾಗಿತ್ತು. ಈ ಸಮುದಾಯಕ್ಕೆ ಎಲ್ಲ ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳಿಗೆ ಬೀರೇಶ್ವರ ದೇವರ ದೇವಾಲಯವೇ ಕೇಂದ್ರ ಸ್ಥಳವಾಗಿತ್ತು.

ಹಾಲುಮತ ಸಮುದಾಯದ ಜನತೆ ಸಮಾಜದಲ್ಲಿ ಕೆಲವು ವಿಶಿಷ್ಟ ಹಕ್ಕು ಬಾಧ್ಯತೆಗಳನ್ನು ಹೊಂದಿದ್ದರು. ಸಾಮಾನ್ಯವಾಗಿ ಸ್ಥಳೀಯ ದೇವಸ್ಥಾನದ ಪೂಜಾರಿಗಳೆಂದು ಈ ಕುರುಬ ಸಮಾಜದ ಸದಸ್ಯರನ್ನು ನೇಮಿಸುವುದು ಪ್ರಾಚೀನ ಕಾಲದಿಂದ ನಡೆದು ಬಂದ ಪದ್ಧತಿಯಾಗಿತ್ತು. ಯಾವುದೇ

ವ್ಯಾಪಾರಿ ಅಥವಾ ಔದ್ಯಮಿಕ ಸಾಹಸವನ್ನು ಕೈಗೊಳ್ಳುವ ಮುಂಚೆ ಸಾಮಾಜಿಕ ಸ್ಥಿತಿಗತಿ ಅಥವಾ ಧಾರ್ಮಿಕ ಭೇದ ಭಾವ ಇಲ್ಲದೆ ಪ್ರತಿಯೊಬ್ಬರು ಕುರುಬ ಸಮಾಜದ ಹಿರಿಯರ ಶುಭ ಹಾರೈಕೆಗಳನ್ನು ಹಾಗೂ ಆಶೀರ್ವಾದವನ್ನು ಪಡೆಯುವುದು ಅನುಷ್ಠಾನವಾಗಿ ನಡೆದುಕೊಂಡು ಬಂದ ಪದ್ಧತಿಯಾಗಿದೆ.

ಹೀಗಾಗಿ ಕುರುಬ ಪಂಗಡವನ್ನು ಸಾಮಾನ್ಯವಾಗಿ ಸಾಮಾಜಿಕವಾಗಿ ಹಿಂದುಳಿದ ಜನಾಂಗದವರೆಂದು ಗುರುತಿಸಲಾಗಿದ್ದರೂ ಆ ಸಮಾಜದ ಜನ ಕೆಲವೊಂದು ಅರ್ಚಕ ವರ್ಗದ ವಿಶೇಷ ಹಕ್ಕು ಬಾಧ್ಯತೆಗಳನ್ನು ಹೊಂದಿ ಸಮಾಜದಲ್ಲಿ ಎಲ್ಲರಿಂದಲೂ ಗೌರವಿಸಲ್ಪಡುತ್ತಿದ್ದರು. ಈ ವಿಧವಾದ ಸಾಮಾಜಿಕ ಗೌರವ ಮತ್ತು ತಂದೆ-ತಾಯಿಗಳಿಂದ ಪೂರ್ವಜರಿಂದ ಬಂದಂತಹ ಸಾಹಸ ಪ್ರವೃತ್ತಿ ಹಾಗೂ ಧೀರೋದಾತ್ತತೆಗಳು ಮಲ್ಲಪ್ಪನವರನ್ನು ಒಬ್ಬ ಧೀರ ನೇತಾರರನ್ನಾಗಿ ಹೊರಹೊಮ್ಮಲು ಅವಶ್ಯಕ ಹಿನ್ನೆಲೆ ಒದಗಿಸಿಕೊಟ್ಟವು.

ಮಲ್ಲಪ್ಪನವರು ಚಿಕ್ಕವರಿರುವಾಗಲೇ ಅವರ ತಂದೆ ತಾಯಿಗಳು ತಮ್ಮ ಕುಟುಂಬವನ್ನು ಕೊಲೂರಿನಿಂದ ಯಾದಗಿರಿಗೆ ಸ್ಥಳಾಂತರಿಸಿದರು. ಯಾದಗಿರಿ ನಗರದಲ್ಲಿ ಮಲ್ಲಪ್ಪನರ ಅಜ್ಜ ಭೀಮಪ್ಪನವರು ರೇಲ್ವೆ ಕಂಪನಿಯ ಗುತ್ತಿಗೆದಾರರಾಗಿದ್ದರು. ಅಲ್ಲದೆ ಅದು ಅವರ ತಂದೆ ತಾಯಿಯ ತವರೂರಾಗಿತ್ತು. ಆ ಕಾರಣದಿಂದ ಅವರು ಯಾದಗಿರಿಯಲ್ಲಿ ಕಾರ್ಯನಿರತರಾದರು. ಅವರು ಕಟ್ಟಿಸಿದ ಮನೆಯು ಯಾದಗಿರಿ ರೇಲ್ವೆ ನಿಲ್ದಾಣದಿಂದ ತುಂಬ ಹತ್ತಿರದಲ್ಲಿದೆ.

ಯಾದಗಿರಿ ನಗರದಲ್ಲಿ ಮಲ್ಲಪ್ಪನವರ ಮನೆಯ ಪರಿಸರ ಅತ್ಯಂತ ಸ್ನೇಹಮಯವೂ ಹಾಗೂ ಸೌಹಾರ್ದಯುತವಾಗಿತ್ತು. ಅವರ ಮನೆತನವು ತಮ್ಮ ನೆರೆಹೊರೆಯವರೊಂದಿಗೆ ಅತ್ಯುತ್ತಮವಾದ ಸಂಬಂಧ ಹೊಂದಿತ್ತು. ಅವರ ನೆರೆ ಹೊರೆಯ ಜನರು ವಿವಿಧ ಧರ್ಮಗಳಿಗೆ ಹಾಗೂ ಜಾತಿವರ್ಗಗಳಿಗೆ ಸೇರಿದವರಾಗಿದ್ದರು. ಯಾವುದೇ ತರಹದ ವೈಷಮ್ಯವಿಲ್ಲದೆ ಅತ್ಯಂತ ಸುಮಧುರವಾದ ಸಂಬಂಧಗಳನ್ನು ಹೊಂದಿದ್ದರು. ವಿಶಾಲ ಹೃದಯ ಉದಾತ್ತ ವ್ಯಕ್ತಿತ್ವದ ಬೆಳವಣಿಗೆಗಳಿಗೆ ಅಲ್ಲಿನ ವಾತಾವರಣ ಸೂಕ್ತವಾಗಿದ್ದಿತು.

ಮಲ್ಲಪ್ಪನವರು ಚಿಕ್ಕವರಾಗಿದ್ದಾಗ ಕೃಷಿ ಹಾಗೂ ಕುರಿಗಾಯಿ ವ್ಯವಸಾಯದಲ್ಲಿ ತಮ್ಮನ್ನು ತಾವು ಅತ್ಯಂತ ಶ್ರದ್ಧೆಯಿಂದ ತೊಡಗಿಸಿಕೊಂಡಿದ್ದರು. ಅವರ ಮನೆತನದಲ್ಲಿ ಐದುನೂರು ಕುರಿಗಳ ಸಂಗ್ರಹವಿದ್ದು, ನಾಲ್ಕು ಜೋಡಿ ಎತ್ತುಗಳ ಕೃಷಿ ವ್ಯವಸಾಯವಿತ್ತು ಪ್ರತಿ ನಿತ್ಯ ಕುರಿಗಳನ್ನು ಊರ ಹೊರಗಿನ ಹುಲ್ಲು ಗಾವಲಿಗೆ ಮೇಯಿಸಲು ಹೊಡೆದುಕೊಂಡು ಹೋಗುವುದು. ಅವರ ಚಿಕ್ಕಂದಿನ ಆಸಕ್ತಿ ಪೂರ್ಣಕಾಯಕವಾಗಿದ್ದಿತು. ಅಲ್ಲದೆ ತಮ್ಮ ಕುಟುಂಬದ ಎಲ್ಲಾ ಕೆಲಸ ಕಾರ್ಯಗಳಲ್ಲಿ ಮಲ್ಲಪ್ಪನವರು ಸಹಾಯ ಮಾಡುತ್ತಿದ್ದರು.

## ಶಿಕ್ಷಣ ಕಲಿತು ನಿನ್ನ ಮಗ ಏನು ಸಾಧಿಸಬೇಕು?

ಅವರ ಕುಟುಂಬದಲ್ಲಿ ಮಲ್ಲಪ್ಪನವರಿಗೆ ಶಿಕ್ಷಣವನ್ನು ಸಂಪಾದಿಸುವ ಸದಾವಕಾಶ ಒದಗಿಬಂತು. ಯಾದಗಿರಿ ನಗರದಲ್ಲಿಯೇ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಆರಂಭಿಸಿದರು. ಆಗ ಮರಾಠಿ ಭಾಷೆಯಲ್ಲಿ ಶಿಕ್ಷಣ ಪೂರೈಸಿಕೊಳ್ಳುವುದು ಅನಿವಾರ್ಯವಾಗಿದ್ದಿತು. ಮರಾಠಿ ಭಾಷೆಯಲ್ಲಿ ಅವರು ಐದನೆಯ ತರಗತಿಯಲ್ಲಿ ಉತ್ತೀರ್ಣರಾದರು. ಏತನ್ಮಧ್ಯೆ ನಿಜಾಮ ಸರಕಾರ ಉರ್ದು ಮಾಧ್ಯಮದಲ್ಲಿ ಶಿಕ್ಷಣ ಆರಂಭಿಸಿತು. ಮುಂದೆ ಎರಡು ವರ್ಷ ಉರ್ದು ಮಾಧ್ಯಮದಲ್ಲಿ ತಮ್ಮ ಶಿಕ್ಷಣ ಪೂರೈಸಿದರು. ಅವರಿಗೆ ಹಿಂದು ಮತ್ತು ಮುಸ್ಲಿಂ ಎರಡೂ ಸಮುದಾಯಕ್ಕೆ ಸೇರಿದ ಶಿಕ್ಷಕರಲ್ಲಿ ಶಿಕ್ಷಣವನ್ನು ಪಡೆಯುವ ಸದಾವಕಾಶ ಒದಗಿ ಬಂದಿತು. ಅವರ ಗುರುಗಳಲ್ಲಿ ಹೊಸಳ್ಳಿಯ ಸಿದ್ಧಯ್ಯಸ್ವಾಮಿ, ಅಬ್ದುಲ್ ರಹೀಮಾನ್ ಸಾಹೇಬ ಎಂಬುವರು ಬಹಳ ಪ್ರಮುಖವಾಗಿದ್ದರು. ಆ ಉಭಯೇತರರಿಗೂ ಮಲ್ಲಪ್ಪನವರೆಂದರೆ ಅಚ್ಚು-ಮೆಚ್ಚು.

ಒಂದು ಮಹತ್ವದ ಘಟನೆಯು ಮಲ್ಲಪ್ಪನವರ ಜೀವನದಲ್ಲಿ ತಿರುವನ್ನು ಕೊಟ್ಟಿತು. ಅವರು ಇನ್ನೂ ಚಿಕ್ಕ ಮಗುವಾಗಿದ್ದಾಗ ಅವರನ್ನು ತಮ್ಮೊಡನೆ ಎಲ್ಲ ಕಡೆಗೆ ಕರೆದುಕೊಂಡು ಹೋಗುವುದು ಲಿಂಗಪ್ಪನವರಿಗೆ ರೂಢಿಯಾಗಿದ್ದಿತು. ಅದೇ ರೀತಿ ಪ್ರತಿ ವರ್ಷದಂತೆ ಭೂಕಂದಾಯವನ್ನು ಒಪ್ಪಿಸಲು ಕಂದಾಯ ಅಧಿಕಾರಿಯ ಮನೆಗೆ ಹೋದಾಗ ಮಗುವನ್ನು ತಮ್ಮೊಡನೆ ಕರೆದುಕೊಂಡು ಹೋಗಿದ್ದರು. ಇದನ್ನು ಗಮನಿಸಿದ ಆ ಅಧಿಕಾರಿ "ಕುರಿಗಾಯಬೇಕಾದ ಈ ಹುಡುಗನನ್ನು ಏಕೆ ಸುಮ್ಮನೆ ಎತ್ತಿಕೊಂಡು ತಿರುಗಾಡುತ್ತಿದ್ದಿ" ಎಂದು ನುಡಿದಾಗ ಪ್ರತಿ ಉತ್ತರವಾಗಿ ಲಿಂಗಪ್ಪನವರು "ನನ್ನ ಮಗ ಶಿಕ್ಷಣ ಕಲಿತು ನಿಮ್ಮ ಹಾಗೆ ಮುಂದೆ ಬರಬೇಕೆಂದಿದ್ದಾನೆ". ಎಂದು ಉತ್ತರಿಸಿದರು. ಅದಕ್ಕೆ ಪ್ರತಿಯಾಗಿ ಆ ಅಧಿಕಾರಿ "ಶಿಕ್ಷಣ ಕಲಿತು ನಿನ್ನ ಮಗ ಏನು ಸಾಧಿಸಬೇಕಾಗಿದೆ?" ಎಂದಾಗ ಈ ಮಾತುಗಳು ಲಿಂಗಪ್ಪನವರಿಗೆ ಆಳವಾದ ವೇದನೆಯನ್ನು ಉಂಟು ಮಾಡಿದವು.

ಆ ಕಾರಣದಿಂದಲೇ ತಮ್ಮ ಮಗನಿಗೆ ಒಳ್ಳೆಯ ಶಿಕ್ಷಣವನ್ನು ಒದಗಿಸಿ, ಅವನೊಬ್ಬ ಅಧಿಕಾರಿಯಾಗಬೇಕೆಂದು ಬಯಸಿ ಶಾಲೆಗೆ ಕಳಿಸಿದರು. ಆದರೆ ಮಲ್ಲಪ್ಪನವರು ಏಳನೆಯ ವರ್ಗದವರೆಗೆ ಯಶಸ್ವಿಯಾಗಿ ಪೂರೈಸಿ ಆ ನಂತರ ಮಾಧ್ಯಮಿಕ ಶಾಲೆ ದೂರದ ನಗರದಲ್ಲಿ ಇದ್ದುದರಿಂದ ಹಾಗೂ ಕೌಟುಂಬಿಕ ತೊಂದರೆಗಳಿಂದ ಅವರ ಶಿಕ್ಷಣ ಮುಂದುವರೆಸಲಿಕ್ಕೆ ಸಾಧ್ಯವಾಗಲಿಲ್ಲ. ಅಲ್ಲದೆ ತಮ್ಮ ಕುಟುಂಬದಲ್ಲಿ ಹಿರಿಯ ಮಗನಾಗಿ ಜನಿಸಿದ್ದರಿಂದಾಗಿ ಕೌಟುಂಬಿಕ ಜವಾಬ್ದಾರಿಯನ್ನು ವಹಿಸಿಕೊಳ್ಳುವ ಕಾರಣಗಳಿಂದ ಅವರಿಗೆ ಶಿಕ್ಷಣವನ್ನು ಮುಂದುವರೆಸಲು ಸಾಧ್ಯವಾಗಲಿಲ್ಲ.

# ತಂದೆಯ ಪ್ರೇರಣೆ

ಮಲ್ಲಪ್ಪನವರು ಶಾಲೆಯಲ್ಲಿ ನೀಡಲಾಗುತ್ತಿದ್ದ ಹೆಚ್ಚಿನ ಶಿಕ್ಷಣದಿಂದ ವಂಚಿತರಾದರು. ಈಗ ಅವರ ಜೀವನವೇ ವಿಶಾಲ ಶಾಲೆ. ಅವರು ನೆರೆಹೊರೆಯಲ್ಲಿದ್ದ ಅನುಭವಿ ಜನರ ಒಡನಾಟದಿಂದಾಗಿ ಅವರ ಮೇಲೆ ಗಹನವಾದ ಪ್ರಭಾವವೂ, ಪ್ರೇರಣೆಯೂ ಉಪಲಬ್ಧವಾಯಿತು. ವಾಸ್ತವಿಕವಾಗಿ ಅದರ ಶ್ರೇಯಸ್ಸು ಅವರ ತಂದೆಯವರಿಗೆ ಸಲ್ಲಬೇಕು. ಅವರು ತಾವು ಹೊರಟಲ್ಲೆಲ್ಲ ತಮ್ಮ ಮಗನನ್ನು ಕರೆದುಕೊಂಡು ಹೋಗುತ್ತಿದ್ದುದೇ ಅದಕ್ಕೆ ಕಾರಣವಾಗಿದ್ದಿತು. ಈ ರೀತಿ ಅವರು ಚಿಕ್ಕಂದಿನಿಂದಲೂ ಬ್ರಾಹ್ಮಣ ಮತ್ತು ಮುಸ್ಲಿಂ ಸಮುದಾಯದ ವಕೀಲರ ಒಡನಾಟದಲ್ಲಿ ಬೆಳೆದುಕೊಂಡು ಬಂದರು. ಕೆಲವು ಸಂದರ್ಭಗಳಲ್ಲಿ ಮಲ್ಲಪ್ಪನವರು ಚಿಕ್ಕವರಿರುವಾಗಲೇ ತಮ್ಮ ತಂದೆಯೊಡನೆ ಹೈದ್ರಾಬಾದಿಗೆ ಹೋಗಿದ್ದರಲ್ಲದೇ ಅಲ್ಲಿ ಅತ್ಯಂತ ಸುರಕ್ಷಿತ ಹಾಗೂ ಪ್ರಭಾವಿಯಾದ ಜನರ ಸಂಪರ್ಕ ಒದಗಿ ಬಂತು.

ಇವೆಲ್ಲವುಗಳಿಂದ ಮಲ್ಲಪ್ಪನವರು ಪ್ರೇರಣೆ ಪಡೆದು ತಮ್ಮ ಜೀವನದಲ್ಲಿ ಕ್ರಿಯಾಶೀಲ ರಾಜಕೀಯವನ್ನು ಪ್ರವೇಶಿಸಲು ಪ್ರೇರಣೆ ಪಡೆದರೆಂಬುದು ಮಹತ್ವದ ವಿಷಯ. ಅವರು ಅತ್ಯಂತ ಸುಸಂಸ್ಕೃತರು ಹಾಗೂ ಶಿಕ್ಷಣಪ್ರೇಮಿಗಳಾದ ಗುಜರಾತಿ ಬ್ರಾಹ್ಮಣ ಮನೆತನದ ಸಂಪರ್ಕ ಹೊಂದಿದ್ದರು. ಈ ರೀತಿ ಮಾರ್ವಾಡಿ, ಲಿಂಗಾಯತ ಬ್ರಾಹ್ಮಣ ಸಮಾಜದ ಜನತೆಯ ಜೀವನದ ವಿಧಾನ ಮತ್ತು ಆಚಾರ ವಿಚಾರಗಳನ್ನು ಬಹುವಾಗಿ ಮೆಚ್ಚಿದರು. ಅಲ್ಲದೆ ಅವರ ಮನೆಯ ನೆರೆ ಹೊರೆಯಲ್ಲಿ ಬಹುತೇಕ ಎಲ್ಲಾ ಸಮುದಾಯದ ಮನೆಗಳು ಸುತ್ತವರೆದಿದ್ದವು.

ಈ ಕಾರಣದಿಂದಾಗಿ ಅವರು ಚಿಕ್ಕಂದಿನಿಂದಲೂ ಎಲ್ಲಾ ಸಮುದಾಯದ ಜನತೆಯೊಡನೆ ಹೊಂದಿಕೊಂಡು ಹೋಗುವ ಪ್ರವೃತ್ತಿಯನ್ನು ಎಲ್ಲರೊಡನೆಯೂ ಸಹಬಾಳ್ವೆಯ ತತ್ವವನ್ನು ಅನುಸರಿಸಿಕೊಂಡು ಬಂದರಲ್ಲದೆ ಎಲ್ಲಾ ಧರ್ಮ ಸಮುದಾಯ ಪಂಗಡ ವಿಷಯವಾಗಿ ಅವರಲ್ಲಿ ವಿಶಾಲ ಮನೋಭಾವನೆ ಬೆಳೆಯಲು ಅವರ ಸಾಮಾಜಿಕ ಪರಿಸರವೂ ಅತ್ಯಂತ ನಿರ್ಣಾಯಕ ಪಾತ್ರ ವಹಿಸಿತ್ತು.

ಮಲ್ಲಪ್ಪನವರ ತಂದೆಯವರಾದ ಲಿಂಗಪ್ಪನವರಿಂದ ಹರಿಜನ, ಲಂಬಾಣಿ ಮುಂತಾದ ನಿಮ್ನ ವರ್ಗದ ಜನರು ಸಲಹೆ ಪಡೆಯಲು ನ್ಯಾಯ ನಿರ್ಣಯಕ್ಕಾಗಿ ಅವರ ಹತ್ತಿರ ಆಗಾಗ ಬರುತ್ತಿದ್ದರು. ಲಿಂಗಪ್ಪನವರ ನ್ಯಾಯಪರ ನಿಲುವು ಆ ಪ್ರದೇಶದಲ್ಲೆಲ್ಲ ಜನಪ್ರಿಯವಾಗಿತ್ತು. ಮಲ್ಲಪ್ಪನವರ ತಂದೆಯವರು ತಮ್ಮ ನೆರೆಹೊರೆಯವರೊಡನೆ ಅತ್ಯಂತ ಸೌಹಾರ್ದಯುತವಾದ ಹಾಗೂ ಭ್ರಾತೃತ್ವದ ಸಂಬಂಧಗಳನ್ನು ಹೊಂದಿದ್ದರು. ಎಲ್ಲರನ್ನು ಸಮಾನತೆ ಹಾಗೂ ಗೌರವ ಭಾವನೆಯಿಂದ ಕಾಣುತ್ತಿದ್ದರು. ಅವರ ತಂದೆಯವರ ಇಂಥ ವಿಶಾಲವಾದ ಮನೋಭಾವನೆ ಮಲ್ಲಪ್ಪನವರ ಎಳೆಯ ವಯಸ್ಸಿನ ಮೇಲೆ ಗಹನವಾದ ಪ್ರಭಾವವನ್ನು ಬೀರಿ ಅವರ ವ್ಯಕ್ತಿತ್ವದ ವಿಕಾಸದಲ್ಲಿ ಮಹತ್ವದ ಪಾತ್ರವಹಿಸಿತು.

ತರುಣ ಮಲ್ಲಪ್ಪನವರಿಗೆ ಕೊಲೂರಿನ ಹನುಮಂತ ದೇವರ ಬಗ್ಗೆ ಅಪಾರ ಭಕ್ತಿ ಇತ್ತು. ಮಲ್ಲಪ್ಪನವರ ತಾತ ಹನುಮಂತಯ್ಯನವರು ಪ್ರತಿ ಅಮಾವಾಸ್ಯೆಗೆ ಕೊಲೂರು ಹನುಮಾನ ದೇವರ ಗುಡಿಗೆ ಬಂದು ದೇವರನ್ನು ಪೂಜಿಸಿ ಹೇಳಿಕೆಗಳನ್ನು ಹೇಳುತ್ತಿದ್ದರು. ಕೊಲೂರು ಜನರು ಇವರನ್ನು ದೇವರ ಸ್ವರೂಪ ಎಂದು ಭಾವಿಸಿದ್ದರು. ಇವರು ಪೊಗಲಾಪುರದಿಂದ ಕಾಲ್ನಡಿಗೆಯಿಂದಲೇ ಬರುತ್ತಿದ್ದರು. ಮಲ್ಲಪ್ಪನವರು ಇವರನ್ನು ಅಪ್ಪಟ ದೇವರ ಭಕ್ತ ಎಂದೇ ಕರೆಯುತ್ತಿದ್ದರು.

ಇವರ ತಾತನವರು ಕೊಲೂರಿಗೆ ಬಂದಾಗ ಇವರ ಸುತ್ತ ಜನರು ಸುತ್ತುವರಿಯುತ್ತಿದ್ದರು. ಭಕ್ತಿ ಭಾವನೆಗಳಿಂದ ಇವರನ್ನು ಆರಾಧಿಸುತ್ತಿದ್ದರು. ಇವೆಲ್ಲವುಗಳು ಮಲ್ಲಪ್ಪನವರ ತರುಣ ಜೀವನದ ಮೇಲೆ ಪರಿಣಾಮ ಬೀರಿ ಭಕ್ತಿ ಭಾವನೆಗಳಲ್ಲಿ ಅವರನ್ನು ನಂಬುವಂತೆ ಪ್ರೇರೇಪಿಸಿತು. ಗೂಗಲ್ ಅಲ್ಲಮಪ್ರಭು ದೇವರ ಗುಡಿಯ ಪೂಜಾರಿಯವರಿಗೂ ಕೊಲೂರು ಗುಡಿ ಪೂಜಾರಿಗೂ ಸಂಪರ್ಕವಿತ್ತು. ಹೀಗಾಗಿ ಕೊಲೂರು ಮತ್ತು ಗೂಗಲ್ ಜನತೆಯೂ ದೇವರ ಮೂರ್ತಿಯನ್ನು ಗಂಗಾ ಸ್ನಾನ ಮಾಡಿಸಲು ಭೀಮಾ ಮತ್ತು ಕೃಷ್ಣಾ ನದಿಗಳ ಸಂಗಮದ ಹತ್ತಿರ ಪ್ರತಿ ಯುಗಾದಿ ಹಬ್ಬಕ್ಕೆ ಹೋಗಿ ದೇವರ ಮೂರ್ತಿಯನ್ನು ಗಂಗಾಭಿಷೇಕ ಮಾಡಿ ಪೂಜೆ ಸಲ್ಲಿಸುತ್ತಿದ್ದರು. ವಾಪಾಸು ಮರಳುವಾಗ ಅಲ್ಲಿಯ ನೀರನ್ನು ತೀರ್ಥವೆಂದು ತೆಗೆದುಕೊಂಡು ಬರುವ ಪದ್ಧತಿ ಇತ್ತು. ಈ ಕಾರ್ಯದಲ್ಲಿ ಎಲ್ಲಾ ಧರ್ಮಿಯರು ಪಾಲ್ಗೊಳ್ಳುತ್ತಿದ್ದರು. ಸರ್ವಧರ್ಮಗಳ ಸಮನ್ವಯತೆಗೆ, ಸೌಹಾರ್ದತೆಗೆ ಇದು ಉತ್ತಮ ನಿದರ್ಶನವಾಗಿದ್ದಿತು.

ಕೊಲೂರು ಜನತೆಯೊಂದಿಗೆ ಕೆಲವು ಸಲ ಮಲ್ಲಪ್ಪನವರು ಹೋಗುತ್ತಿದ್ದರು. ಈ ಒಂದು ಅಂಶವು ಕೂಡ ಮಲ್ಲಪ್ಪನವರಿಗೆ ಸಹೋದರತ್ವ ಭಾವನೆ ಮೂಡಲು ಕಾರಣವಾಗಿ ಧಾರ್ಮಿಕ ನಂಬಿಕೆ ಮುಂತಾದ ಒಳ್ಳೆಯ ಗುಣಗಳನ್ನು ಬೆಳೆಸಿಕೊಳ್ಳಲು ಮತ್ತು ಸೌಹಾರ್ದತೆಯ ಬದುಕು ಸಾಗಿಸಲು ಉತ್ತಮ ತಳಹದಿಯನ್ನೇ ಹಾಕಿತೆನ್ನಬಹುದು. ಒಟ್ಟಿನಲ್ಲಿ ಮಲ್ಲಪ್ಪನವರಿಗೆ ತಂದೆ-ತಾಯಿ, ತಾತ ಮತ್ತು ನೆರೆಹೊರೆಯ ಪರಿಸರ ಹಾಗೂ ಗುಜರಾತಿ ಮರಾಠಿ ಮುಸ್ಲಿಂ ಗುರುಗಳ ಮತ್ತು ವಕೀಲರ ಪ್ರಭಾವವೂ ಆಯಿತೆಂದು ಹೇಳಬಹುದು.

## ಸಾರ್ವಜನಿಕ ಸೇವೆಗೆ ಪಾದಾರ್ಪಣೆ

ಮಲ್ಲಪ್ಪನವರು ಪ್ರೌಢಾವಸ್ಥೆಗೆ ಕಾಲಿಟ್ಟ ನಂತರ ಸಾರ್ವಜನಿಕ ಕ್ಷೇತ್ರಕ್ಕೆ ಧುಮುಕಿ ಸಾರ್ವಜನಿಕ ಸೇವೆಯಲ್ಲಿ ತೊಡಗಿದರು. ಆರಂಭದಲ್ಲಿ ಅವರು ಸ್ಟಾಂಪುಗಳನ್ನು ಗುತ್ತಿಗೆ ಹಿಡಿದು ಮಾರಾಟ ಮಾಡುವ ಕಾರ್ಯದಲ್ಲಿ ತೊಡಗಿದರು. ಅವರು ಸಮಯವನ್ನು ಸುಮ್ಮನೆ ಹಾಳು ಮಾಡುತ್ತಿರಲಿಲ್ಲ. ಸಮಯದ ಬಗ್ಗೆ ಪರಿಜ್ಞಾನ ಹೊಂದಿದ್ದ ಅವರು ಇವತ್ತು ಮಾಡುವ ಕೆಲಸವನ್ನು ಅವರು ನಾಳೆಗಾಗಿ ಎಂದೂ ಮುಂದೂಡಲಿಲ್ಲ. ಅದನ್ನು ಆ ದಿನವೇ ಮಾಡುತ್ತಿದ್ದರು. ಮಲ್ಲಪ್ಪನವರು ಯುವಕ ಮಿತ್ರರನ್ನು ಸಂಘಟಿಸಿ ಅವರಲ್ಲಿ ಮೂಲಭೂತ ಹಕ್ಕುಗಳ ಬಗ್ಗೆ ಕಲ್ಪನೆಯನ್ನು ಮೂಡಿಸುತ್ತಿದ್ದರು. ಸ್ವಾತಂತ್ರ್ಯ, ಸಮಾನತೆ, ಸಹೋದರತ್ವಗಳ ಅರ್ಥವನ್ನು ಜನತೆಗೆ ಅರ್ಥವತ್ತಾಗಿ ವಿವರಿಸುತ್ತಿದ್ದರು.

ಅಂದಿನ ಸರಕಾರದ ಅಸಮರ್ಥ ಆಡಳಿತವನ್ನು ವಿರೋಧಿಸಲು ಜನರನ್ನು ಸಜ್ಜುಗೊಳಿಸಿದರು. ಬೆಳೆವ ಸಿರಿ ಮೊಳಕೆಯಲ್ಲಿ ಎನ್ನುವಂತೆ ಮಲ್ಲಪ್ಪನವರು ಬಾಲ್ಯಾವಸ್ಥೆಯಿಂದ ಆದರ್ಶ ಗುಣಗಳನ್ನು, ಉದಾತ್ತ ಗುರಿಗಳನ್ನು ಹೊಂದಿ ತನ್ನ ಸುತ್ತ ಮುತ್ತಲಿನ ಯುವಕರಿಗೆ ಮಾರ್ಗದರ್ಶಿಯಾಗಿದ್ದರು. ಅವರು ನ್ಯಾಯಕ್ಕಾಗಿ ಹೋರಾಟ ಮಾಡಲು ಯಾವ ಸಂದರ್ಭದಲ್ಲಿಯೂ ಹಿಂಜರಿಯುತ್ತಿರಲಿಲ್ಲ. ಎಲ್ಲಾ ಧರ್ಮಿಯರ ನೋವು ನಲಿವುಗಳಲ್ಲಿ ಭಾಗಿಯಾಗುತ್ತಿದ್ದರು. ಜನರ ಸಮಸ್ಯೆಗಳ ಪರಿಹಾರಕ್ಕಾಗಿ ಹೋರಾಟಕ್ಕೆ ಇಳಿದರು. ಇದು ಅವರ ಸ್ವಭಾವವಾಗಿ ಬೆಳೆದುಬಂದಿತು.

ಕೆಲವು ವರ್ಷ ಸ್ಟಾಂಪುಗಳನ್ನು ಗುತ್ತಿಗೆ ಹಿಡಿದು ಮಾರಾಟ ಮಾಡಿದ ಅವರು ನಂತರ ಗುತ್ತೇದಾರಿಕೆ ಕೆಲಸವನ್ನು ಆರಂಭಿಸಿದರು. ಅವರು ಹರಗೋಲು ಗುತ್ತಿಗೆಯನ್ನು ಹಿಡಿದು ಅದರಲ್ಲಿ ಪ್ರಾಮಾಣಿಕ ಸೇವೆಯನ್ನು ಮಾಡಿದರು. ನಂತರ ಅಂತಸ್ತು (ಬಿಲ್ಡಿಂಗ್) ಕೆಲಸ ಮತ್ತು ಇತರ ಕೆಲಸಗಳನ್ನು ಮಾಡಿಸಿ ಅವರು ಅತ್ಯುತ್ತಮ ಗುತ್ತಿಗೆದಾರರು ಎಂದು ಗುರುತಿಸಿಕೊಂಡರು.

ಮಲ್ಲಪ್ಪನವರು ಹಳ್ಳಿ ಹಳ್ಳಿಯಲ್ಲಿ ಯುವಕ ಮಿತ್ರರನ್ನು ಸಂಘಟಿಸಿ ಅವರಲ್ಲಿ ರಾಜಕೀಯ ಜಾಗೃತಿಯನ್ನು ಮೂಡಿಸಲು ಮುಂದಾದರು. ಪ್ರಗತಿಪರ ಆಳಿತವನ್ನು ಜಾರಿಗೊಳಿಸಲು ನಿಜಾಮ ಸರಕಾರಕ್ಕೆ ಕೇಳಿಕೊಂಡರಲ್ಲದೆ ಹೋರಾಟವನ್ನು ಘೋಷಿಸಿದರು. ಸರ್ವರೂ ಸ್ವತಂತ್ರರು. ಆದರೆ ಅವರು ಹಲವು ಸಂಕೋಲೆಗಳಿಂದ ಬಂಧಿತರಾಗಿದ್ದಾರೆ ಎಂಬ ಉನ್ನತ ತತ್ವದ ಸಾರವನ್ನು ಅರಿತ ಮಲ್ಲಪ್ಪನವರು ಸರ್ವರಿಗೂ ಸ್ವಾತಂತ್ರ್ಯ ಸಿಗಬೇಕು, ಪ್ರತಿಯೊಬ್ಬರೂ ರಾಜಕೀಯ ಹಕ್ಕುಗಳನ್ನು ಪಡೆಯಬೇಕು ಎಂಬುದು ಅವರ ಪ್ರಬಲ ಗುರಿಯಾಗಿದ್ದಿತು. ಈ ನಿಟ್ಟಿನಲ್ಲಿ ಅವರು ಜನತೆಯನ್ನು ಸಂಘಟಿಸಲು ತೊಡಗಿದರು. ನೊಂದ ಜನತೆಯಲ್ಲಿ ಅದೆಷ್ಟು ಶಕ್ತಿ ಇದೆ ಎಂಬುದನ್ನು ಅವರು ಅರಿತಿದ್ದರು.

ಯುವಕರಿದ್ದಾಗ ಮಲ್ಲಪ್ಪನವರು ಮೊದಲು ಮಾಡಿದ ಪ್ರಮುಖ ಕಾರ್ಯವೆಂದರೆ ಹಾಲಮತ ಜನಾಂಗದ ಉಣ್ಣೆ ವ್ಯಾಪಾರದಲ್ಲಿ ಸಕ್ರಿಯವಾಗಿ ಭಾಗವಹಿಸಿ ಅದರಲ್ಲಿ ಆಗುವಂಥ ದೋಷಗಳನ್ನು ನಿವಾರಿಸಿ ಜನತೆಗೆ ಉಣ್ಣೆಯ ವ್ಯಾಪಾರ ಒಂದು ಲಾಭದಾಯಕ ಹುದ್ದೆ ಎಂಬುದನ್ನು ಮನದಟ್ಟು ಮಾಡಿಸಿದರು. ಇದೇ ವೇಳೆಗೆ ಹೈದ್ರಾಬಾದ್ ರಾಜ್ಯ ವಿಮೋಚನೆಗೊಳಿಸಲು ಜನಾರ್ಧನರಾವ್ ದೇಸಾಯಿ, ಜಿ. ರಾಮಾಚಾರ್ಯ ಅವರ ಜೊತೆಗೂಡಿ ಚಳುವಳಿ ಆರಂಭಿಸಿದರು.

ಅಂದು ಸಾಪ್ತಾಯಿಕ ಧ್ವಜವಂದನೆ ಹಾಗೂ ಹಿಂದೂ ಹಬ್ಬಗಳು ನಡೆಯದಂತೆ ನಿಜಾಮ್ ಸರಕಾರದ ಬೆಂಬಲ ಪಡೆದ ಕೆಲವು ದುಷ್ಟ ಶಕ್ತಿಗಳು ಪ್ರಯತ್ನಿಸುತ್ತಿದ್ದವು. ಇದು ಮಲ್ಲಪ್ಪನವರಿಗೆ ಹೋರಾಟಕ್ಕಿಳಿಯಲು ಕಾರಣವಾಯಿತು. ಆಡಳಿತ ಯಂತ್ರ ಸಂಪೂರ್ಣವಾಗಿ ಕುಸಿದು ಜನರಲ್ಲಿ ಕ್ರಾಂತಿಯನ್ನು ಮಾಡಲು ಒತ್ತಾಯಿಸುವಂತೆ ಇತ್ತು. ಅಪಾರ ಸಂಖ್ಯೆಯ ಜನತೆಯೂ ಇವರಿಗೆ ಬೆಂಬಲಿಸಿದರು.

ಹೈದ್ರಾಬಾದ್ ವಿಮೋಚನೆಯನ್ನು ಒಂದು ಸವಾಲಾಗಿ ಸ್ವೀಕರಿಸಿ ಮಲ್ಲಪ್ಪನವರು ಹೋರಾಟಕ್ಕಿಳಿದರು. ಸಾರ್ವಜನಿಕರ ಪ್ರಗತಿಗಾಗಿ ಅವರ ಸಮಸ್ಯೆಗಳ ಪರಿಹಾರಕ್ಕಾಗಿ ಹೋರಾಟದ ಮನೋಭಾವನೆಯನ್ನು ಬೆಳೆಸಿಕೊಂಡಿದ್ದರು. ತಂದೆಯವರಿಂದಲೇ ನಿಷ್ಪಕ್ಷಪಾತ ನ್ಯಾಯದ ಅಂಶವನ್ನು ಕಲಿತುಕೊಂಡಿದ್ದ ಅವರು ತಮ್ಮಲ್ಲಿಗೆ ಬಂದವರಿಗೆಲ್ಲ ಪ್ರಾಮಾಣಿಕ ನ್ಯಾಯ ನೀಡುವ ಕಾರ್ಯವನ್ನು ಆರಂಭಿಸಿದರು. ಇದು ಯುವಕರಾಗಿದ್ದಾಗಲೇ ಅವರ ಬದುಕಿನಲ್ಲಿ ಅಳವಡಿಸಿಕೊಂಡ ಮಹತ್ವದ ಅಂಶವಾಗಿದೆ. 'ಮನೆ ಗೆದ್ದು ಮಾರು ಗೆಲ್ಲು' ಎಂಬ ನಾಡು ನುಡಿಗೆ ಮಲ್ಲಪ್ಪನವರು ವಿರೋಧಿಯಾಗಿದ್ದರು ಎನ್ನಬಹುದು. ಏಕೆಂದರೆ ಸಾರ್ವಜನಿಕರ ಕೆಲಸಗಳೇ ನಮ್ಮ ಮನೆಯ ಕೆಲಸಗಳು, ಅವುಗಳನ್ನು ನಿವಾರಿಸಲು ಪ್ರಯತ್ನಿಸುವುದೇ ನಮ್ಮ ಕರ್ತವ್ಯ. ಅಂದಾಗ ಮಾರು ಗೆದ್ದಂತ್ತಲ್ಲವೇ ಎಂದು ಪ್ರಶ್ನಿಸುತ್ತಿದ್ದರು.

## ದಾಂಪತ್ಯದ ರಸಘಳಿಗೆ

ಅವರ ದಾಂಪತ್ಯ ಬದುಕು ಅನ್ಯೋನ್ಯತೆಯಿಂದ ಕೂಡಿದ್ದು ಸಮಾಜದ ಇತರ ಕುಟುಂಬಗಳಿಗೆ ಮಾದರಿಯಾಗಿದ್ದಿತು. ಅವರು ಮದುವೆಯಾದಾಗ ಸುಮಾರು 25 ವಯಸ್ಸಿನರಾಗಿದ್ದರು. ಇಂದಿನಂತೆ ಕನ್ಯಾನ್ವೇಷಣೆಗಾಗಿ ಊರೂರು ಅಲೆಯಲಿಲ್ಲ. ಮನೆಯ ಯಜಮಾನರಾದ ತನ್ನ ತಂದೆಯ ಮೇಲೆ ತನ್ನ ಜೀವನದ ಸಂಗಾತಿಯನ್ನು ಆಯ್ಕೆ ಮಾಡಲು ಬಿಟ್ಟಿದ್ದರು. ಅಂದು ಅವರಿಗೆ ತಮ್ಮ ಮಗಳನ್ನು ಕೊಡಲು ರಸ್ತಾಪುರ ಗ್ರಾಮದ ಪ್ರಮುಖ ವ್ಯಕ್ತಿ ಹಾಗೂ ಸುರಪುರ ಸಂಸ್ಥಾನದಿಂದ ಭೀಮಕವಿ ಎಂಬ ಬಿರುದು ಪಡೆದ ವ್ಯಕ್ತಿ ಒಂದೆರಡು ಸಲ ಯಾದಗಿರಿಯ ಮನೆಗೆ ಬಂದಿದ್ದರು. ಆದರೆ ದೈವ ಸಂಕಲ್ಪ ಕೂಡಿ ಬರಲಿಲ್ಲೇನೋ? ಈ ಸಂಬಂಧ ಏರ್ಪಡಲಿಲ್ಲ.

ಇದೇ ಸಮಯದಲ್ಲಿ ರಾಯಚೂರು ಜಿಲ್ಲೆ ರಾಂಪುರ ಮರಾಠಿ ಜನಾಂಗದವರು ಮಲ್ಲಪ್ಪನವರ ನೆರೆಮನೆಯ ಮರಾಠರೊಡನೆ ವೈವಾಹಿಕ ಸಂಬಂಧ ಮಾಡಿದ್ದರಿಂದ ರಾಮಂಪುರದವರು ಹೆಚ್ಚಾಗಿ ಯಾದಗಿರಿಗೆ ಬರುತ್ತಿದ್ದರು. ಹೀಗಾಗಿ ಅವರ ಪರಿಚಯ ಲಿಂಗಪ್ಪನವರಿಗೆ ಗಾಢವಾಗಿತ್ತು. ಒಂದು ಸಾರಿ ಅವರೊಡನೆ ಲೋಕಾಭಿರಾಮವಾಗಿ ಮಾತನಾಡುತ್ತಾ ಮಲ್ಲಪ್ಪನವರ ಮದುವೆ ವಿಷಯವನ್ನು ಅವರ ಮುಂದೆ ಪ್ರಸ್ತಾಪಿಸಿದರು.

ಆಗ ಅವರು "ನೋಡ್ರಿ ಯಜಮಾನರೆ ನಿಮ್ಮ ಜನಾಂಗ ನಮ್ಮ ಊರಲ್ಲಿ ಸಾಮಾಜಿಕವಾಗಿ ಒಳ್ಳೆಯವರಾಗಿದ್ದು, ಹೃದಯ ಶ್ರೀಮಂತಿಕೆಯನ್ನು ಹೊಂದಿದ್ದವರು ಇದ್ದಾರೆ. ಅವರಿಗೂ ನಿಮಗೂ ಸಂಬಂಧ ಉತ್ತಮವಾಗಿ ಕಲೆಯಬಹುದು." ಎಂದಾಗ ಲಿಂಗಪ್ಪನವರು ನೋಡೋಣವೆಂದರು. ನಾಳೆಯೇ ನಾನು ಹೋಗಿ ನೋಡಿ ಬರುತ್ತೇನೆಂದು ಮರುದಿನವೇ ರಾಂಪುರಕ್ಕೆ ಪ್ರಯಾಣ ಬೆಳೆಸಿದರು. ಲಿಂಗಪ್ಪನವರು ರಾಂಪುರಕ್ಕೆ ತಲುಪಿ ವಧುವನ್ನು ನೋಡಿ ಒಪ್ಪಿಕೊಂಡು ಊರಿಗೆ ಮರಳಿದರು.

ಮಲ್ಲಪ್ಪನವರನ್ನು ಕುರಿತು ಲಿಂಗಪ್ಪನವರು "ನಿನ್ನ ಬಾಳಸಂಗಾತಿಯನ್ನು ನೋಡಿ ಆಯ್ಕೆ ಮಾಡಿ ಬಂದಿದ್ದೇನೆ" ಎಂದಾಗ ಹೀಗೆ ಹೇಳಿದರು: "ನಿಮ್ಮ ಆಯ್ಕೆಯೇ ನನ್ನ ಆಯ್ಕೆ ಎಂದರಂತೆ." ಕೆಲವು ತಿಂಗಳು ಕಳೆದ ನಂತರ 1929ರಲ್ಲಿ ಮಲ್ಲಪ್ಪನವರು ಸೌಭಾಗ್ಯವತಿ ಶಂಕರಮ್ಮ ಎಂಬುವರನ್ನು ತಮ್ಮ ಧರ್ಮಪತ್ನಿಯನ್ನಾಗಿ ಸ್ವೀಕರಿಸಿದರು. ಅವರ ಮದುವೆಯು ಕುಲದೈವ ಕೊಲೂರು ಬೀರೇಶ್ವರ ದೇವರ ಗುಡಿ ಮುಂದೆ ಸಕಲ ಸಡಗರದಿಂದ ನಡೆಯಿತು. ತಮ್ಮ ಹೃದಯ ಸಂಭ್ರಮ ಶ್ರೀಮಂತಿಕೆಯಿಂದ ಅಪಾರ ಜನಸ್ತೋಮದಿಂದ ತಮ್ಮ ವ್ಯಕ್ತಿತ್ವವನ್ನು ಗುರುತಿಸಿಕೊಂಡಿದ್ದರಿಂದ ಮದುವೆ ಸಮಾರಂಭಕ್ಕೆ ಅಪಾರ ಸಂಖ್ಯೆಯ ಜನರು ಸೇರಿದ್ದಲ್ಲದೆ ಮದುವೆಯ ಸಮಾರಂಭವನ್ನು ಯಶಸ್ವಿಗೊಳಿಸಿದರು.

ಮದುವೆಯಾದ ಹೊಸದರಲ್ಲೇ ಅವರು ಕೊಲೂರು ಅಣ್ಣಪ್ಪ ಶರಣರ ದರ್ಶನ ಪಡೆದರು. ಲಿಂಗಪ್ಪನವರು ಧಾರ್ಮಿಕತೆಯಲ್ಲಿ ಅಪಾರ ನಂಬುಗೆಯನ್ನು ಹೊಂದಿದವರಾದುದರಿಂದ ಅವರು ಎಲ್ಲಾ ಧರ್ಮದ ದೇವರುಗಳನ್ನು ಪೂಜ್ಯತೆಯಿಂದ ಕಾಣುತ್ತಿದ್ದರು. ಅವರು ಮಲ್ಲಪ್ಪನವರನ್ನು ಮತ್ತು ಅವರ ಪತ್ನಿಯನ್ನು ಹಲವು ದೇವರುಗಳ ದರ್ಶನಕ್ಕೆ ಕರೆದೊಯ್ದರು. ಅರಿಕೆರಿ ಎಂಬಲ್ಲಿ ಒಬ್ಬ ಸಾಧುವಿನ ದರ್ಶನ ಪಡೆದು ಮಲ್ಲಪ್ಪನವರು ಪತ್ನಿಯೊಡನೆ ಗೂಗಲ್ಲಿನ ಅಲ್ಲಮ ಪ್ರಭುವಿನ ದರ್ಶನಕ್ಕ ಹೋಗಿ ಆಶೀರ್ವಾದ ಪಡೆದು ಬಂದರಲ್ಲದೆ. ಮತ್ತೆ ಮೈಲಾಪುರದ ಮಲ್ಲಯ್ಯ ದೇವರ ದರ್ಶನ ಪಡೆದ ನಂತರ ಹುಲಿಜಂತಿ ಮಾಲಿಂಗರಾಯ ದೇವರ ದರ್ಶನ ಪಡೆದರು.

ಅವರು ಮದುವೆಯಾದ ಒಂದು ವರ್ಷದವರೆಗೆ ಹಲವು ದೇವರುಗಳ ದರ್ಶನ ಪಡೆದರು. ಇಂತಹ ಧಾರ್ಮಿಕ ಭಾವನೆ ತಂದೆಯವರಿಂದಲೇ ಬೆಳೆಸಿಕೊಂಡರು. ಹೀಗಾಗಿ ದೇವರಲ್ಲಿ ಅವರು ಅಪಾರ ನಂಬುಗೆಯನ್ನು ಇಟ್ಟು ಹಾಗೆಯೇ ನಡೆದುಕೊಂಡರು. ಹೀಗಾಗಿ ದೇವರಲ್ಲಿ ಅವರು ಅಪಾರ ನಂಬುಗೆಯನ್ನು ಇಟ್ಟು ಹಾಗೆಯೇ ನಡೆದುಕೊಂಡು. ಬಸವಣ್ಣನವರ 'ನುಡಿದಂತೆ ನಡೆ ಇದೇ ಜನ್ಮ ಕಡೆ' ಎಂಬ ಮಾತಿನಂತೆ ತಮ್ಮ ನಡತೆಯನ್ನು ರೂಪಿಸಿಕೊಂಡರು.

ಮಲ್ಲಪ್ಪನವರು ಸುಮಾರು ಹದಿನೈದು ವರ್ಷ ದಾಂಪತ್ಯ ಜೀವನ ಕಳೆದರು. ಅವರ ದಾಂಪತ್ಯ ಬದುಕು ಸಮರಸವಾಗಿತ್ತು. ಆದರೆ ಕಾಲ ಚಕ್ರದಂತೆ ಮನುಷ್ಯನ ಬದುಕಿನಲ್ಲಿ ಏರಿಳಿತಗಳು ಸಂಭವಿಸುವುದುಂಟು. ಇದು ಮಲ್ಲಪ್ಪನವರ ಬದುಕಿಗೆ ಹೊರತಾಗಿರಲಿಲ್ಲ. ಅವರ ಕೌಟುಂಬಿಕ ಸುಖ ಬಹುಕಾಲ ಉಳಿಯಲಿಲ್ಲ. ಆದರೂ ಅವರ ದಾಂಪತ್ಯ ಬದುಕು ಅವರು ವಾಸಿಸುತ್ತಿದ್ದ ಸುತ್ತಮುತ್ತಲಿನ ಪ್ರದೇಶಕ್ಕೆ ಮಾದರಿಯಾಗಿತ್ತು.

# ವಿದ್ಯೆಗೆ ಮಹತ್ವ ನೀಡಿದ ಅನಕ್ಷರಸ್ಥ ಮಹದಿ

ಪ್ರತಿಯೊಬ್ಬ ವ್ಯಕ್ತಿಯ ಬದುಕಿನಲ್ಲಿ ಅವರ ಜೀವನ ಸಂಗಾತಿಯ ಪಾತ್ರ ಹಿರಿದಾಗಿರುತ್ತದೆ. ಕೈ-ಕೈ ಕೂಡಿದಾಗಲೇ ಚಪ್ಪಾಳೆ ಎನ್ನುವಂತೆ ಸತಿಪತಿಯರು ಅರಿತು ಬಾಳಿದಾಗಲೇ ಸುಖ-ಸಂಸಾರದ ಕನಸು ನನಸಾಗಬಹುದು. ಪತ್ನಿಯನ್ನು ಅರ್ಧಾಂಗಿನಿ ಎಂದು ಸಂಬೋಧಿಸುವುದು ಹೆಚ್ಚು ಅರ್ಥಪೂರ್ಣವೆನಿಸುತ್ತದೆ. ಶಂಕರಮ್ಮನವರು ಅರ್ಥಹೀನ ಸಂಪ್ರದಾಯಗಳಲ್ಲಿ ಜಾತಿಯ ವಿಚಾರದಲ್ಲಾಗಲಿ ಎಂದೂ ಸಂಕುಚಿತ ಸ್ವಭಾವನ್ನು ಬೆಳೆಸಿಕೊಂಡವರಲ್ಲ.

ಆದರೆ ಚಿಕ್ಕಂದಿನಿಂದಲೂ ತಂದೆಯಿಂದ ಪ್ರಭಾವಿತರಾಗಿ ಅವರ ದೈವ ಭಕ್ತಿಯನ್ನು ಆಗಿನಿಂದಲೇ ಮೂಡಿಸಿಕೊಂಡು ಬಂದಿದ್ದರು. ಅನಕ್ಷರಸ್ಥರಾದರೂ ವಿದ್ಯೆಗೆ ಹೆಚ್ಚಿನ ಮಹತ್ವವನ್ನು ನೀಡುತ್ತಿದ್ದ ಅವರು ನೆರವು ಬಯಸಿ ಬಂದವರನ್ನು ಎಂದೂ ಹಿಂದೆ ಕಳಿಸಲಿಲ್ಲ. ತಮ್ಮ ಕೈಯಲ್ಲಿರುವ ದುಡ್ಡನ್ನು ದಾನ ಮಾಡಲು ಎಂದೂ ಹಿಂಜರಿಯಲಿಲ್ಲ. ಮನೆಗೆ ಯಾವ ವ್ಯಕ್ತಿ ಮಗು ಬಂದರೂ ಸಾಕು ಅದು ಏನನ್ನಾದರೂ ತೆಗೆದುಕೊಳ್ಳಬಯಸಿದರೆ, ಅದನ್ನು ಪತ್ನಿಗೆ ಕೊಡಿಸಿಕೊಂಡು ಅದಕ್ಕೆ ಅರ್ಥವಾಗುವ ರೀತಿಯಲ್ಲಿ ವಿವರಿಸುತ್ತಿದ್ದರು.

ಹಣ ಸಂಗ್ರಹವೇ ತಮ್ಮ ಗುರಿ ಎಂದು ಭಾವಿಸಿದವರಲ್ಲ. ಅವರಿಗೆ ನಾಗರೀಕ ಹಕ್ಕು ಬಾಧ್ಯತೆಗಳ ಬಗ್ಗೆ ವಿಶೇಷ ಕಾಳಜಿ ಇತ್ತು. ಪ್ರತಿಯೊಬ್ಬ ವ್ಯಕ್ತಿಗೂ ಗುರಿ ಇರಬೇಕು. ಗುರಿಯಿಲ್ಲದ ಜೀವನ ಬೇರಿಲ್ಲದ ಗಿಡವಂತೆ ಎಂಬುದು ಮಲ್ಲಪ್ಪನವರ ಧರ್ಮಪತ್ನಿಯವರ ನಿಲುವಾಗಿತ್ತು. ಅವರು ಹೇಳುವಂತೆ ಗುರಿಯು ಸಾಧ್ಯವಾದಷ್ಟು ಎತ್ತರವಾಗಿರಬೇಕು. ಗುರಿ ಚಿಕ್ಕದಾಗಿದ್ದರೆ ಏನನ್ನು ಸಾಧಿಸಲಾರಿರಿ. ಮಾಡಿದ ಕೆಲಸದಿಂದ ಆತ್ಮ ತೃಪ್ತಿ ಉಂಟಾಗಬೇಕೆಂದು ಹೇಳುತ್ತಿದ್ದ ಅವರ ಮಾತುಗಳ ಹಿಂದೆ ಸಹಜವಾಗಿ ಮಲ್ಲಪ್ಪನವರು ಇಷ್ಟು ದೀರ್ಘಕಾಲ ಬೆಳೆಸಿಕೊಂಡು ಬಂದಿರುವ ಆದರ್ಶ, ಕಳಕಳಿ ಎದ್ದು ಕಾಣುತ್ತದೆ.

ಎಂಟು ಎತ್ತಿನ ಒಕ್ಕಲುತನದ ಅವರ ಮನೆಯಲ್ಲಿ ಏಳೆಂಟು ಆಳುಗಳು. ಅಲ್ಲದೆ ಅವರ ಮನೆಗೆ ಬಂದು ಹೋಗುವವರ ಸಂಖ್ಯೆಗೆ ಲೆಕ್ಕವೇ ಇರಲಿಲ್ಲ. ಅವರಿಗೆ ಊಟ ಬಡಿಸುವುದು. ಅವರನ್ನು ಆತ್ಮೀಯತೆ ಆದರದಿಂದ ಕಾಣುವುದು ಅವರ ಹುಟ್ಟು ಗುಣವಾಗಿತ್ತು. ಅವರು ನಗುಮೊಗದಿಂದ ದಿನವೂ ಸೂರ್ಯೋದಯಕ್ಕೆ ಮೊದಲೇ ತಮ್ಮ ಕೆಲಸ ಪ್ರಾರಂಭಿಸಿ ರಾತ್ರಿಯವರೆಗೆ ನಿರಂತರವಾಗಿ ದುಡಿಯುವ ಸೇವಾ ದುರಂಧರೆಯಾಗಿದ್ದರು ಎಂಬುದು ನಿರ್ವಿವಾದ. ಅದ್ಭುತ ಸಹನೆ ಸಮತೋಲನ ಮನೋಭಾವ ಸದಾಚಾರ ಬೆಳೆಸಿಕೊಂಡಿದ್ದವರು ತಮ್ಮ ಮಗನ ಮೇಲೆ ಗುರುತರವಾದ ಹೊಣೆಯನ್ನು ಹೊತ್ತಿದ್ದರು. ಅವರು ಆದರ್ಶವನ್ನು ಮುಂದುವರೆಸಿಕೊಂಡು ಹೋಗುವ ಕನಸು ಕಂಡಿದ್ದರು.

ಶ್ರೀಮಂತ ಕುಟುಂಬದಲ್ಲಿ ಬೆಳೆದು ಬಂದಿದ್ದರೂ ಶ್ರೀಮಂತಿಕೆಯನ್ನು ಪ್ರದರ್ಶಿಸುವ ಯಾವುದೇ ಅಂಶವೂ ಅವರಲ್ಲಿ ಕಾಣಸಿಗುತ್ತಿರಲಿಲ್ಲ. ಸರಳ ಸಜ್ಜನಿಕೆಯನ್ನು ಹೃದಯ ಶ್ರೀಮಂತಿಕೆಯನ್ನು ಹೊಂದಿದ್ದರು. ಮಲ್ಲಪ್ಪನವರನ್ನು ಭೇಟಿಯಾಗಲು ದಿನನಿತ್ಯ ಮನೆಗೆ ಬರುವ ಅಪಾರ ಜನಸ್ತೋಮವನ್ನು ಕಂಡು ಎಂದೂ ಬೇಸರಪಟ್ಟವರಲ್ಲ. ಅವರನ್ನು ಪ್ರೀತಿಯಿಂದ ಬರಮಾಡಿಕೊಳ್ಳುತ್ತಿದ್ದರಲ್ಲದೆ, ಸೋದರತ್ವದ ಭಾವನೆಯಿಂದ ಮಾತನಾಡಿಸಿ ಉಪಚರಿಸುವ ದೊಡ್ಡಗುಣ ಅವರಲ್ಲಿತ್ತು.

ಅವಿದ್ಯಾವಂತೆಯಾಗಿದ್ದರೂ ವಿದ್ಯಾವಂತರನ್ನು ಮೀರಿಸುವಷ್ಟು ವ್ಯಕ್ತಿತ್ವವನ್ನು ಹೊಂದಿದ್ದು ಇವರ ಪ್ರಭಾವ ಮಲ್ಲಪ್ಪನವರ ಮೇಲೆ ಗಾಢವಾಗಿ ಬೀರಿತು ಎನ್ನುವುದರಲ್ಲಿ ಎರಡು ಮಾತಿಲ್ಲ. ಬಡವರ ಬಗ್ಗೆ ಅಪಾರ ಕರುಣೆ ಹೊಂದಿ ಅವರ ಮೇಲೆ ಗೌರವ ಇಟ್ಟುಕೊಂಡರಲ್ಲದೆ ತಮ್ಮ ಜೀವನಾಡಿಯನ್ನಾಗಿ ಮಾಡಿಕೊಂಡರು. ಅವರ ಪ್ರಮುಖ ಉದ್ಯೋಗ ಕೃಷಿಗೆ ಸಹಾಯ ನೀಡಲು ಕೃಷಿ ಕಾರ್ಮಿಕರನ್ನು ತಮ್ಮ ಹೊಲಗದ್ದೆಗಳಲ್ಲಿ ಕೆಲಸಕ್ಕೆ ಹಚ್ಚಿ ಅವರೊಂದಿಗೆ ಬೆರೆತು ಕೆಲಸ ಮಾಡಿಸುತ್ತಿದ್ದರು. ಆ ಮಹಿಳಾ ಕಾರ್ಮಿಕರನ್ನು ತುಂಬಾ ಆದರದಿಂದ ಕಾಣುತ್ತಿದ್ದರಲ್ಲದೆ. ಅವರ ಪರಿಶ್ರಮಕ್ಕೆ ತಕ್ಕ ಪ್ರತಿಫಲ ನೀಡಲು ಮಲ್ಲಪ್ಪನವರಿಗೆ ಕೇಳಿಕೊಳ್ಳುತ್ತಿದ್ದರು.

ಹಸಿದು ಬಂದವರಿಗೆ ಅನ್ನ ಹಾಕುವ, ಬೇಡಲು ಬಂದವರಿಗೆ ಸಹಾಯ ಮಾಡುವ ದೊಡ್ಡಗುಣ ಅವರಲ್ಲಿತ್ತು. ಒಂದು ರೀತಿಯಲ್ಲಿ ಅವರ ಮನೆ ದಾಸೋಹ ಮನೆಯಂತಿತ್ತು. ಮೃದು ಸ್ವಭಾವದ ಅವರ ವ್ಯಕ್ತಿತ್ವವನ್ನು ಜನ ಹೊಗಳದೇ ಇರುತ್ತಿರಲಿಲ್ಲ. ಅನ್ಯಾಯ, ಅನಾಚಾರಗಳನ್ನು ಯಾವುದೇ ಮುಲಾಜಿಲ್ಲದೆ ಖಂಡಿಸುತ್ತಿದ್ದರು. ಉತ್ತಮ ಗೃಹಿಣಿಯಾಗಿ ತಮ್ಮ ಬದುಕನ್ನು ಹಸನಾಗಿ ಇರಿಸಿಕೊಳ್ಳಲು ಸದಾ ಪ್ರಯತ್ನಿಸುತ್ತಿದ್ದರು.

ಅವರು ಅಡುಗೆಯನ್ನು ಅಚ್ಚುಕಟ್ಟಾಗಿ ಮಾಡುತ್ತಿದ್ದರಲ್ಲದೆ, ಮನೆಯ ಕೆಲಸಗಳನ್ನು ನಿರ್ವಹಿಸುವಲ್ಲಿ ಇತರ ಕುಟುಂಬದ ಮಹಿಳೆಯರಿಗೆ ಮಾದರಿಯಾಗಿದ್ದರು. ಅವರ ಕೈಗಳು ಅದೆಷ್ಟೋ ಜನರಿಗೆ ಊಟ ಬಡಿಸಿದವು. ಮನೆಗೆಲಸದ ನಡುವೆ ಹೊಲಗದ್ದೆಯ ಕಡೆಗೆ ಹೆಚ್ಚಿನ ಗಮನ ಕೊಡುತ್ತಿದ್ದರು. ವಾರಕ್ಕೆ ಒಂದು ಸಲವಾದರೂ ಹೊಲಗದ್ದೆಗೆ ಹೋಗಿ ಸ್ವಲ್ಪಕಾಲ ಕಳೆದು ಬರುತ್ತಿದ್ದರು. ಆಳುಗಳು ಮಾಡುವ ಕೆಲಸವನ್ನು ಅವರು ನಿರೀಕ್ಷಿಸುತ್ತಿದ್ದರು. ಹೊಲದಲ್ಲಿ ಕಳೆ ತೆಗೆಯುವಾಗ, ಶೇಂಗಾ ಆಯುವಾಗ ಮತ್ತು ಬಿತ್ತುವ ಸಂದರ್ಭಗಳಲ್ಲಿ ಅವರು ತಪ್ಪದೇ ಹೊಲಕ್ಕೆ ಹೋಗುತ್ತಿದ್ದರು. ಕೃಷಿಯಲ್ಲಿ ಕೂಡ ಹೀಗೆ ಮಲ್ಲಪ್ಪನವರಿಗೆ ಸಹಕಾರ ನೀಡುತ್ತಿದ್ದರು.

ಅವರು ಮನೆಯಲ್ಲಿ ಎಂದೂ ಆಲಸಿಯಾಗಿ ಕುಳಿತವರಲ್ಲ, ಯಾವುದಾದರೊಂದು ಚಟುವಟಿಕೆಗಳಲ್ಲಿ ತೊಡಗಿರುತ್ತಿದ್ದರು. ಮಕ್ಕಳ ಪೋಷಣೆಯ ಹೊಣೆಯನ್ನು ಅವರೇ ನಿರ್ವಹಿಸುತ್ತಿದ್ದರಲ್ಲದೆ, ಮಲ್ಲಪ್ಪನವರ ಬದುಕಿನ ಇತರ ಕಾರ್ಯಗಳಲ್ಲಿ ನೆರವಾಗುತ್ತಿದ್ದರು.

ಅವರು ನೆರೆಯ ಕುಟುಂಬದೊಂದಿಗೆ ಯಾವತ್ತೂ ಯಾವುದೇ ಕಲಹ ಮಾಡಿದ್ದು ಅವರ ಬದುಕಿನುದ್ದಕ್ಕೂ ಕಂಡಿಲ್ಲ. ಅವರು ನೆರೆ ಹೊರೆಯವರೊಂದಿಗೆ ಮಧುರ ಸಂಬಂಧವನ್ನೇ ಹೊಂದಿದ್ದು, ಅವರ ಪ್ರೀತಿಗೆ ಪಾತ್ರರಾಗಿದ್ದರು. ಅವರು ಕೆಲಸದಲ್ಲಿ ತೊಡಗಿದ್ದರೆಂದರೆ ಊಟ, ನಿದ್ರೆ, ವಿಶ್ರಾಂತಿ ಇವುಗಳ ಪರಿವೆಯೇ ಇರುತ್ತಿರಲಿಲ್ಲ. ಕಾಯಕವೇ ಕೈಲಾಸವೆನ್ನುತ್ತಿದ್ದರು. ಅವರ ಸಂಸಾರ ದೊಡ್ಡದಾಗಿತ್ತು. ಇಬ್ಬರು ಗಂಡು ಮಕ್ಕಳು ಒಬ್ಬ ಹೆಣ್ಣು ಮಗಳಿದ್ದು, ಮಕ್ಕಳನ್ನು ಎಂದೂ ಗದರಿಸುತ್ತಿರಲಿಲ್ಲ. ಶಿಸ್ತು, ಸಂಯಮ ಹಾಗೂ ಜ್ಞಾನಾರ್ಜನೆಯ ಬಗ್ಗೆ ಅವರಿಗಿದ್ದ ಆಸಕ್ತಿಯನ್ನು ಅವರ ಸ್ವಲ್ಪದಿನಗಳ ಸಹವಾಸದಿಂದಲೇ ಮಕ್ಕಳು ರೂಢಿಸಿಕೊಂಡರು. ಹೆಣ್ಣು ಮಕ್ಕಳು ಮನೆ ಗೆಲಸದಲ್ಲಿ ಮಾತ್ರವೇ ಆಸಕ್ತಿ ವಹಿಸಬೇಕು ಎಂಬುದು ಅವರ ನಿಲುವಾಗಿರಲಿಲ್ಲ. ಅವರು ಮುಂದುವರೆದು ಸ್ವಾವಲಂಬಿಗಳಾಗಿರಬೇಕೆಂಬ ಹಂಬಲ ಅವರಿಗಿತ್ತು.

ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ಇವರಿಗೆ ಇದ್ದ ಕಳಕಳಿಯಿಂದ ಮುಂದೆ ಇವರ ಒಬ್ಬ ಮಗ ವಕೀಲನಾದರೆ, ಇನ್ನೊಬ್ಬ ಡಾಕ್ಟರಾಗಿದ್ದರು. ಅವರು ಯಾವುದೇ ವಿಚಾರಕ್ಕೂ ಗಡಿಬಿಡಿ ಮಾಡಿದವರಲ್ಲ. ಯಾರಾದರೂ ಅವರನ್ನು ಕಾಣಲು ಬಂದರೆ ತನ್ನ ಗೃಹ ಕಾರ್ಯಗಳೇನಿದ್ದರೂ ಕೂಡಾ ಅವರಿಗೆ ಸೂಕ್ತ ಮಾರ್ಗದರ್ಶನ ನೀಡಿ, ಅವರಿಗೆ ಗೌರವದಿಂದ ಬೀಳ್ಕೊಡುತಿದ್ದರು. ಇದು ಅವರಿಗೆ ರೂಢಿಯಾಗಿ ಬಂದಿತ್ತು.

ವಾರಕ್ಕೆ ಒಮ್ಮೆಯಾದರೂ ಮಲ್ಲಪ್ಪನವರನ್ನು ಭೇಟಿಯಾಗುವ ಬಯಕೆ ನನ್ನದು. ಒಂದು ಸಲ ನಾನು ಅವರನ್ನು ಕಾಣಲು ಹೋದಾಗ ಅವರು ನನ್ನೊಡನೆ ಮಾತನಾಡುತ್ತ ಕುಳಿತಿರುವ ಸಂದರ್ಭದಲ್ಲಿ ಅವರ ದೃಷ್ಟಿ ಮೇಜಿನ ಮೇಲಿರುವ ಲಕೋಟೆಯ ಕಡೆ ಹರಿಯಿತು. ಅದು ಮದುವೆಯ ಆಹ್ವಾನ ಪತ್ರಿಕೆಯಾಗಿತ್ತು. ದಿನವು ಅದೇ ಆಗಿತ್ತು. ಅರೇ ಬಾಪು ಇದೇನು ಅಕ್ಷತೆ ಇಂದೇ ಇದೆಯಲ್ಲ, ಬರುವುದಿದ್ದರೆ ನೀನು ಬಾ ಎಂದು ಬಟ್ಟೆ ಧರಿಸಿ ತಯಾರಾಗಿ ತಮ್ಮ ಆತ್ಮೀಯರ ಮನೆಗೆ ದೂರವಾಣಿ ಮೂಲಕ ಕರೆ ನೀಡಿದರು. ಆದರೆ ಅವರಿರಲಿಲ್ಲ. ನಾನು ಹೋಗುವುದು ಹೇಗೆ ಎಂದಾಗ ಏನಪ್ಪಾ ಇಲ್ಲೇ ಸಮೀಪವಿದೆ. ನಡೆದುಕೊಂಡು ಹೋಗೋಣ. ಬೇಕಾದರೆ ತ್ರಿಚಕ್ರವಾಹಾನ ತೆಗೆದುಕೊಂಡು ಹೋಗೋಣ ಎಂದರು.

ಆದರೆ ನನ್ನ ಮನಸ್ಸು ಕೇಳಲಿಲ್ಲ. ಯಾವುದಾದರೂ ಇಲಾಖೆಯ ಮುಖ್ಯಸ್ಥರಿಗೆ ದೂರವಾಣಿ ಮಾಡಿರಿ ಎಂದು ನಿಧಾನವಾಗಿ ನುಡಿದಾಗ, ಏನು ಹೇಳುತ್ತಿ ಬಾಪು, ಇದು ಸರಿಯಾದ ಮಾರ್ಗವಲ್ಲ. ಸರ್ಕಾರದ ವಸ್ತು ಬಳಸಬಾರದು ಎಂದಾಗ ಅವರ ವ್ಯಕ್ತಿತ್ವದ ಒಳಛಾಪು ಅರ್ಥವಾಯಿತು. ಇಂಥ ಪ್ರಸಕ್ತ ಸಮಯದಲ್ಲಿ ಸರಕಾರಿ ವಾಹನಗಳನ್ನು ಹೊಂದಿರುವ ಬಹುತೇಕ ಅಧಿಕಾರಿಗಳು ದಿನದ ಇಪ್ಪತ್ನಾಲ್ಕು ಗಂಟೆಗಳು ಪುಕ್ಕಟೆ ಬಳಸಿಕೊಳ್ಳುವುದು ಇಂದಿನ ವಾಸ್ತವ ಚಿತ್ರ. ನಿಜವಾಗಿ ಮಲ್ಲಪ್ಪನವರ ಬದುಕು ನೋಡಿದಾಗ ಅದೊಂದು ಅರ್ಥಪೂರ್ಣ ಬದುಕು. ಇಂಥವರು ಬೆರಳಣಿಕೆಯಷ್ಟು ನಮ್ಮ ದೇಶದಲ್ಲಿ ಸಿಗಬಹುದು. ನಾನು ಅವರು ತ್ರಿಚಕ್ರ ವಾಹನದಲ್ಲಿ ಹೋಗಿ ಮದುವೆಯಲ್ಲಿ ಪಾಲ್ಗೊಂಡು ಫಲಾಹಾರ ಸೇವಿಸಿ ವಾಪಾಸಾಗಬೇಕು ಎನ್ನುವುದರಲ್ಲಿ ಅವರ ಪ್ರಾಮಾಣಿಕತೆ ನಿಸ್ವಾರ್ಥ ಬದುಕು ಅರ್ಥ ಮಾಡಿಕೊಂಡಿರುವ ಅವರ ಆತ್ಮೀಯರು ತಮ್ಮ ಕಾರನ್ನು ಕೊಟ್ಟು ಕಳಿಸಿದರು.

ಅದರಲ್ಲೇ ಮಲ್ಲಪ್ಪನವರು ಪ್ರಯಾಣ ಮಾಡಿ ಮನೆ ತಲುಪಿದರು. ಮಲ್ಲಪ್ಪನವರು ಅದೆಂತಹ ಸೇವಾ ಮನೋಭಾವನೆ ಹೊಂದಿದ್ದಾರೆಂದರೆ ತಾವು ರಾಯಚೂರಿಗೆ ಅಥವಾ ಬೆಂಗಳೂರಿಗೆ ಹೋಗುವಾಗ ತಮ್ಮ ಬ್ಯಾಗನ್ನು ತಾವೇ ಹಿಡಿದುಕೊಂಡು ಹೋಗಿ ತ್ರಿಚಕ್ರವಾಹನ ಹತ್ತುವುದು ಅವರ ಕೆಲಸ. ನಾನು ಜೊತೆ ರೈಲು ನಿಲ್ದಾಣಕ್ಕೆ ಹೋಗುವ ಸಂದರ್ಭದಲ್ಲಿ ಅವರ ಬ್ಯಾಗನ್ನು ಕೊಡಲು ಕೇಳಿಕೊಂಡೆ. ಅವರು ಬೇಡಪ್ಪಾ ನಿನೇಕೆ ಹಿಡಿಯುತ್ತಿ? ಇನ್ನೂ ನನ್ನ ಕೈ ಕಾಲು ಗಟ್ಟಿಯಾಗಿವೆ. ಯಾರಾದರೂ ಕೈಕಾಲು ಗಟ್ಟಿಯಾಗಿ ಇರುವವರೆಗೆ ತಮ್ಮ ವಸ್ತುಗಳನ್ನು ತಾವೇ ಹಿಡಿದುಕೊಳ್ಳಬೇಕು. ನಂತರವಂತು ಇರತೀರಲ್ಲಾ ಎಂದು ಹೇಳಿ ಬ್ಯಾಗನ್ನು ಹಿಡಿದು ನನಗೆ ಆದರ್ಶ ವಿಚಾರಗಳನ್ನು ಹೇಳುತ್ತಾ ನಡೆಯತೊಡಗಿದರು. ನಾನು ಅವರನ್ನು ಮತ್ತೆ ವಿನಂತಿ ಪೂರ್ವಕವಾಗಿ ಕೇಳಿಕೊಂಡೆ. ಏನಪ್ಪಾ ನಿನಗೆ ತ್ರಾಸ ಮಾಡಿದ ಹಾಗಾಯಿತು ಎಂದು ಹೇಳಿದ ಅವರ ಮಾತು ನನ್ನ ಅಂತರಂಗವನ್ನು ಕೆದಕಿದಂತಾಯಿತು.

## ಸಮಾಜ ಸಂದೇಶ

ಯುವಕರು ಸುಂದರ ಸಮಾಜವನ್ನು ನಿರ್ಮಿಸಬಲ್ಲರು. ಏನು ಬೇಕಾದರೂ ಸಾಧಿಸಬಲ್ಲರು ಎಂಬುದಕ್ಕೆ ಎರಡು ಮಾತಿಲ್ಲ ಎನ್ನುತ್ತಾರೆ. ಯುವ ಶಕ್ತಿಗೆ ಅವರು ಹತ್ತು ಹಲವಾರು ಹಿತ ನುಡಿಗಳನ್ನು ನುಡಿದು ಬದುಕಿನಂಗಳದಲ್ಲಿ ರೂಢಿಸಿಕೊಳ್ಳಲು ಕರೆ ನೀಡಿದ್ದಾರೆ.

ಯುವಕರು ಇಂದು ಸೇವಾ ಮನೋಭಾವನೆಯನ್ನು ಬೆಳೆಸಿಕೊಳ್ಳಬೇಕು. ತಮ್ಮ ಜೀವನದುದ್ದಕ್ಕೂ ಸಮಾಜದ ಕಾರ್ಯದಲ್ಲಿ ನಿರತರಾಗಿರಬೇಕು. ಸೋಮಾರಿ ಆಗಿರಬಾರದು. ತನಗಿಂತ ಹೆಚ್ಚಾಗಿ ಬೇರೆಯವರಿಗೆ ಉಪಯೋಗವಾಗುವಂತಹ ಕಾರ್ಯ ಮಾಡುವುದೇ ಸೇವೆ ಎನಿಸುವುದು. ಇಂಥ ಸಾಮಾಜಿಕ ಸೇವೆ ಮಾಡುವ ಶಕ್ತಿ ಬೆಳೆಸಿಕೊಳ್ಳಬೇಕಾಗಿದೆ. ಯುವಕರು ಸಮಾಜ ಪ್ರಜ್ಞೆಯುಳ್ಳವರಾಗಿದ್ದರೆ ಮಾತ್ರ ಮನುಷ್ಯತನಕ್ಕೆ ಸರಿಯಾದ ಅರ್ಥಬರುತ್ತದೆ.

ಯುವಕರು ತಾವು ಬದುಕಲು ಬಾಳಲು ಬೆಳೆಯಲು ಏನನ್ನಾದರೂ ಮಾಡಬೇಕಾಗಿರುವಂತೆ ಸಮಾಜವು ಬದುಕಲು ಬಾಳಲು ಬೆಳೆಯಲು ಏನಾದರೂ ಮಾಡಬೇಕು. ತನ್ನ ಸುತ್ತಮುತ್ತಲಿನ ಸಮಾಜವನ್ನು ಉತ್ತಮಗೊಳಿಸಲು ಯುವಕ ಯುವತಿಯರು ತಮ್ಮಿಂದಾದ ಸೇವೆ ಸಲ್ಲಿಸುವುದು ಕರ್ತವ್ಯದ ಗುರಿಯಾಗಿದೆ. ಅಂದಿನ ಯುವಕರಲ್ಲಿ ಇಂತಹ ಪರಿಕಲ್ಪನೆಗಳು ಇದ್ದುದರಿಂದಲೇ ಪ್ರಪಂಚದಲ್ಲಿ ನಾಗರಿಕತೆ, ಸಂಸ್ಕೃತಿ ಉಳಿದು ಬೆಳೆದುಕೊಂಡು ಬಂದಿದೆ. ಇಂದು ಕರ್ತವ್ಯದ ವಿಫಲತೆ ಅವನತಿಗೆ ನಾಂದಿ ಹಾಡಿದೆ. ಯುವಕರು ತನ್ನ ಸುತ್ತಮುತ್ತಲಿನ ಸಮಾಜವನ್ನು ಕಟ್ಟಬಲ್ಲರು. ಕಟ್ಟಿದ್ದನ್ನು ಕೆಡವಬಲ್ಲರು, ಆದ್ದರಿಂದ ಯುವಕರು ಸಮಾಜಕ್ಕೆ ಮಾರಕರಾಗದೆ ಪೂರಕವಾಗಬೇಕು. ಯುವಕರು ಸಮಾಜಕ್ಕೆ ತಮ್ಮಿಂದೇನಾದರೂ ಒಳಿತಾಗುವ ಕೆಲಸ ಮಾಡಬೇಕು. ಆಗ ಮಾನವನ ಜೀವನದ ಶ್ರೇಷ್ಠ ತತ್ವವಾಗಿರುವ ಸಮಾಜಸೇವೆಗೆ ಒಂದಿಷ್ಟು ಅರ್ಥವಾದರೂ ಬಂದೀತು.

ಪ್ರತಿಫಲಾಪೇಕ್ಷೆಯಿಲ್ಲದೆ ಸಮಾಜಸೇವೆ ಮಾಡುವುದು ನಿಜವಾಗಿಯೂ ಅತ್ಯಂತ ಆದರ್ಶನೀಯವಾಗಿದೆ. ಹೃದಯ ಹೀನವಾದ ಮೌಢ್ಯ ಜನರು ಇಂಥವರನ್ನು ಕಂಡರೆ ಅಪಹಾಸ್ಯ ಮಾಡುತ್ತಾರೆ. ಆದರೆ ಇಂಥಹದಕ್ಕೆಲ್ಲಾ ಯುವಶಕ್ತಿ ಕಿವಿಗೊಡಬಾರದು. ತನ್ನ ಕಾರ್ಯವನ್ನು ಮುಂದುವರಿಸಬೇಕು. ಆದರ್ಶಸಮಾಜಸೇವಕನಲ್ಲಿ ಕೆಲವು ಒಳ್ಳೆಯ ಗುಣಗಳಿರುತ್ತವೆ. ಸರಳತೆ, ಸೌಜನ್ಯತೆ, ನಿರಾಡಂಬರತ್ವದ ಕಾರ್ಯತತ್ಪರತೆ, ಸದ್ವಿನಯ ಈ ಗುಣಗಳನ್ನು ಯುವಕರು ಜೀವನದಲ್ಲಿ ಅಳವಡಿಸಿಕೊಂಡು ಕಾರ್ಯಚರಣೆಗೆ ತಂದಾಗ ಆತ ಒಬ್ಬ ಆದರ್ಶ ಸಮಾಜ ಸೇವಕನೆನಿಸುತ್ತಾನೆ. ಆದರೆ ಪ್ರಸಕ್ತ ಪರಿಸ್ಥಿತಿಯಲ್ಲಿ ಇಂತಹ ಆದರ್ಶ ಗುಣಗಳು ದೌರ್ಬಲ್ಯ ಎನಿಸುವಷ್ಟರ ಮಟ್ಟಿಗೆ ಜನರ ಮೌಲ್ಯಮಾಪನ ವಿಪರ್ಯಾಸಗೊಂಡಿದೆ. ಎಂದು ಮಲ್ಲಪ್ಪನರು ಕಳವಳಗೊಂಡಿದ್ದರು. ಆದರೆ ಇಂದಿನ ಯುವಶಕ್ತಿ ಈ ಎಲ್ಲಾ ಗುಣಗಳನ್ನು ತನ್ನ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕು. ಅಂದಾಗ ದೃಢ ಸಮಾಜವನ್ನು ನಿರ್ಮಾಣ ಮಾಡಲು ಸಾಧ್ಯವಾಗುತ್ತದೆ.

ಇಂದಿನ ಯುವಕರು ಸಮಾಜಸೇವೆ ಮಾಡಬೇಕೆಂಬ ಉತ್ಕಟಾಪೇಕ್ಷೆ, ಅದಮ್ಯ ಉತ್ಸಾಹ, ಸಮಾನವಾದ ಆಸಕ್ತಿ ಬೆಳೆಸಿಕೊಳ್ಳಬೇಕು. ಕೇವಲ ಕ್ಷಣಿಕ ಆಸೆಗಾಗಿ ಅಥವಾ ಸನ್ನಿವೇಶ ಸೆಳೆತಕ್ಕೆ ಮನಸ್ಸಿಲ್ಲದ ಮನಸ್ಸಿನಿಂದ ಸಮಾಜಸೇವೆಯನ್ನು ಮಾಡುವುದರಿಂದ ಏನನ್ನು ಪಡೆಯಲಾಗದು.ಎಷ್ಟೇ ಸಮಸ್ಯೆ ಅಥವಾ ಅಪವಾದಗಳು ಬಂದರೂ ಕೂಡ ಚದರದೆ ಗುರಿ ಸಾಧಿಸುವ ಉತ್ಸಾಹ ಮೂಡಿಸಿಕೊಳ್ಳಬೇಕಾಗಿದೆ. ಸಮಾಜಸೇವೆಯಲ್ಲಿ ತೊಡಗಿದ ವ್ಯಕ್ತಿಗೆ ಜನರಿಂದ ಅಪವಾದ ಬರಬಹುದು. ಇದು ಎಂತಹವರಿಗೂ ತಪ್ಪಿದ್ದಲ್ಲ. ಯುವಶಕ್ತಿ ಇದಕ್ಕೆ ಗಮನ ಕೊಡದೆ ತಮ್ಮ ರಚನಾತ್ಮಕ ಕಾರ್ಯ ಮುಂದುವರಿಸಬೇಕು. ಅಂದಾಗ ಮಾತ್ರ ಉತ್ತಮ ಸಮಾಜ ನಿರ್ಮಾಣ ಸಾಧ್ಯ. ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸಬೇಕೆನ್ನುವ ತತ್ವಕ್ಕೆ ಇಂದಿನ ಯುವಕರು ಬದ್ಧರಾಗಬೇಕು.

ಇಂದಿನ ಯುವಕರು ಸಹನಶೀಲತೆಯ ಜೊತೆಗೆ ವಿನಯ, ಮಧುರವಾದ ಮಾತು, ಎಲ್ಲರೊಳು ಸಲ್ಲುವಂತಹ ನೀತಿ, ಎಲ್ಲರನ್ನು ಗೆಲ್ಲುವಂತಹ ಹೃದಯ ಬೆಳಸಿ ಕೊಳ್ಳಬೇಕಾಗಿದೆ. ಬಗ್ಗ ಗಿಡ ಹೀಗೆ ಬೆಳೆಸುತ್ತವೆ. ಮೃದುವಾದ ಮಾತು ಕಠಿಣವಾದ ಹೃದಯವನ್ನು ಗೆಲ್ಲಬಹುದು. ಯುವಕರು ಒಳ್ಳೆತನವನ್ನು ಬೆಳೆಸಿಕೊಳ್ಳಬೇಕು. ತಾನು ಒಳ್ಳೆವನೆಂಬ ಅಹಂಭಾವ ಇರಬಾರದು. ಇದು ಇತರರ ಅಸೂಯೆಗೆ ಅವಕಾಶ ಮಾಡಿಕೊಟ್ಟಂತಾಗುತ್ತದೆ. ಆದರೆ ಅತಿ ವಿನಯವು ಕೆಲವೊಮ್ಮೆ ಅಪಾಯ ತಂದೊಡ್ಡಬಲ್ಲದು. ಆದರೂ ಪ್ರತಿಯೊಬ್ಬ ಯುವಕನು ತನ್ನ ಬದುಕಿನಲ್ಲಿ ಅಳವಡಿಸಿಕೊಳ್ಳುವುದು ಇಂದು ಅತಿ ಅವಶ್ಯವಾಗಿದೆ. "ವಿನಯವು ಬದುಕಿಗೆ ಭೂಷಣವಲ್ಲವೇ" ಎನ್ನುತ್ತಿದ್ದರು ಕೊಲೂರು ಮಲ್ಲಪ್ಪನವರು.

ಯುವಕರು ಸಮಾಜ ಕ್ಷೇತ್ರದಲ್ಲಿ ಸಮಸ್ಯೆಗಳಿವೆ ಎಂದು ಭೀತಿ ಪಡಬಾರದು. ನಿರುತ್ಸಾಹರಾಗಬಾರದು. ಸಮಾಜದಲ್ಲಿ ಇರಬಹುದಾದ ಸಮಸ್ಯೆಗಳನ್ನು ಸಮಾಜ ಜಾಗ್ರತೆಗೊಳಿಸಿ ನಿವಾರಣೆ ಮಾಡಬಹುದಲ್ಲವೆ? ಸಮಾಜವು ಹದವಾಗಬೇಕು. ಅದಕ್ಕಾಗಿ ಯುವಕರು ಇಂದು ಸೇವಾಕಾಂಕ್ಷೆ, ಶ್ರದ್ಧೆ, ನಿಷ್ಠೆ, ಪ್ರಾಮಾಣಿಕತೆ ಬೆಳೆಸಿಕೊಳ್ಳುವುದು ಇಂದು ಅನಿವಾರ್ಯವಾಗಿದೆ. ಚಿನ್ನವನ್ನು ಕಾಸಿ ನೋಡಿದಾಗ ಅದರ ಬೆಲೆ ಹೆಚ್ಚುವಂತೆ ಎಲ್ಲಾ ಎಡರು ತೊಡರುಗಳನ್ನು ಎದುರಿಸಿ ಸತ್ಯ ಸಿದ್ಧಿ ಪಡೆದಾಗ ಆ ಯುವಕರಿಗೆ ಬೆಲೆ ಬರುತ್ತದೆ. ಸತ್ಯ ಪರಿಪಾಲನೆಯಲ್ಲಿ ಕಷ್ಟ ನಷ್ಟಗಳು ಬಹಳ. ಆದರೆ ಕೊನೆಯಲ್ಲಿ ಚಿರಶಾಂತಿಗೆ ಕೀರ್ತಿ ಸಿಗುವುದು ದಿಟ.

ಯುವಕರು ಕಷ್ಟಗಳನ್ನು ಎದುರಿಸದೆ ಕ್ಷಣಿಕ ಸುಖಕ್ಕಾಗಿ ಸುಳ್ಳಿನ ಸುಳುವಿಗೆ ಸಿಕ್ಕಬಾರದು. ಮೊದಲು ಸುಳ್ಳಿಗೆ ಸುಖ ಸಿಕ್ಕಿತಾದರೂ ಅದು ಶಾಶ್ವತವಲ್ಲ. ಸತ್ಯಕ್ಕೆ ಸಾವಿಲ್ಲ ಎಂಬುದಂತೂ ಖಚಿತ. ತಾಯಿಯ ಆದೇಶದಂತೆ ಗಾಂಧೀಜಿಯವರು ಸತ್ಯ ಅಹಿಂಸೆಗಳಿಂದಲೇ ಭಾರತಕ್ಕೆ ಸ್ವಾತಂತ್ರ್ಯವನ್ನು ತಂದುಕೊಟ್ಟಿದ್ದಾರಲ್ಲದೇ ಅವರ ಜೀವನದಲ್ಲಿ ಸತ್ಯಹರಿಶ್ಚಂದ್ರ ನಾಟಕದಿಂದ ಪ್ರೇರಿತರಾಗಿ ಆದರ್ಶವನ್ನು ಮೈಗೂಡಿಸಿಕೊಂಡು ಬಾಳಿ ಬದುಕಿದರು. ಸತ್ಯ ಪ್ರಯೋಗಕ್ಕೆ ತಮ್ಮನ್ನೇ ಅರ್ಪಿಸಿಕೊಂಡರು. ಇಂದಿನ ಯುವಕರು ಸತ್ಯ ಸಾಧನೆಯಲ್ಲಿ ತಮ್ಮ ಜೀವನವನ್ನು ತೊಗಿಸಿಕೊಂಡರೆ ಗಾಂಧೀಜಿಯವರು ಕಂಡ ಕನಸು ನನಸಾಗಬಲ್ಲರು.

ಯುವಕರೆ ಗಮನಿಸಿರಿ, ಕೆಡುವ ಒಡಲಿಗಾಗಿ ಸಾವಿರಾರು ಸುಳ್ಳುಗಳನ್ನು ಹೇಳಿ ಸಂಪಾದಿಸಿದ ಸ್ವತ್ತು ಜೀವನಾಂತ್ಯದಲ್ಲಿ ಬೆನ್ನು ಹತ್ತಿ ಬರಲಾರದು. ಎಂದು ಹೇಳುತ್ತಿದ್ದ ಮಲ್ಲಪ್ಪನವರ ಮಾತು ಎಷ್ಟು ಔಚಿತ್ಯ ಪೂರ್ಣವೆನಿಸುತ್ತದೆ. 'ನುಡಿದಂತೆ ನಡೆ ಇದೇ ಜನ್ಮಕಡೆ' ಎಂಬ ತತ್ವಸಾರವನ್ನು ಯುವಕರು ಅಳವಡಿಸಿಕೊಂಡು ತಾವು ನುಡಿವ ನುಡಿಯಂತೆ ನಡೆಯನ್ನು ಅನುಗೊಳಿಸುವುದು ಪ್ರಮುಖ ಸಾಧನೆಯೆನಿಸುವುದು. ಆದರೆ ಇಂದು ಸಾಮಾಜಿಕ ಜೀವನದಲ್ಲಿ ಕ್ಷಣಕ್ಷಣಕ್ಕೂ ಸತ್ಯಕ್ಕೆ ವಿಮುಖವಾಗುತ್ತಿರುವ ಸನ್ನಿವೇಶನಗಳು ಅತಿಯಾಗಿವೆ. ಯುವಕರು ಇದಕ್ಕೆಲ್ಲಾ ಆಸ್ಪದ ಮಾಡಿಕೊಡಬಾರದು. ಹಿರಿಯರ ದಾರಿಯಲ್ಲಿ ಕಿರಿಯರು ಅವರ ಉತ್ತಮ ಗುಣಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಅಂದಾಗ ಮಾತ್ರ ಬದುಕಿಗೆ ಅರ್ಥಬರುವುದು.

ಸತ್ಯವನ್ನು ವ್ಯಕ್ತಿಯು ಯಾವತ್ತೂ ಮುಚ್ಚಿಡಬಾರದು. ಇದ್ದದ್ದನ್ನು ಇದ್ದ ಹಾಗೆ ಹೇಳಿದರೆ ಅದರಿಂದ ಏನು ಹಾನಿಯಿಲ್ಲ. ಸತ್ಯತನವು ವ್ಯಕ್ತಿಯ ವ್ಯಕ್ತಿತ್ವವನ್ನು ಎತ್ತರಿಸಬಲ್ಲದು. ಕ್ಷಮೆಯಿಂದ ಅಪರಾಧಿ ತನ್ನ ತಪ್ಪನ್ನು ತಿದ್ದಿಕೊಳ್ಳುವನು. ಶಿಕ್ಷೆ ಅಪರಾಧಿಯಲ್ಲಿ ಅಸೂಯೆ, ಸ್ಪರ್ಧೆ ಬೆಳೆಸುವುದು. ಅಪರಾಧಿಗೆ ತಪ್ಪನ್ನು ತಿಳಿಸುವುದರಿಂದ ಅವನು ಸುಧಾರಿಸಬಹುದು. ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಯು ತಪ್ಪನ್ನು ಮಾಡುವುದು ಸಹಜ. ನಡೆಯುವ ವ್ಯಕ್ತಿ ಎಡವಿ ಬೀಳುವುದು ಸಹಜ. ಆದರೆ ಕುಳಿತಿರುವ ವ್ಯಕ್ತಿ ಬೀಳಲಾರ. ಎಡವಿ ಬಿದ್ದೆನೆಂದು ಹಿಂದಕ್ಕೆ ಸರಿಯುವುದು ಸರಿಯಲ್ಲ. ಮುಂದೆ ನಡೆಯಲು ಪ್ರಯತ್ನಿಸಬೇಕು. ಮುನ್ನುಗ್ಗುತ್ತಾ ಹೋದರೆ ಎಲ್ಲರೂ ಒಪ್ಪುತ್ತಾರೆ. ಚಿಕ್ಕಮಗು ಅದೆಷ್ಟು ಸಲ ಬಿದ್ದು ನಡೆಯಲು ಕಲಿಯುವುದಿಲ್ಲವೆ? ತಪ್ಪನ್ನು ತಿದ್ದಿಕೊಳ್ಳುವುದು ಅಪರಾಧಿಯ ಕಾರ್ಯವಾದರೆ, ಎಷ್ಟಾದರೂ ಕ್ಷಮಿಸುವುದು ಕ್ಷಮಾವಂತನ ಕರ್ತವ್ಯವಾಗಿದೆ.

ಧರ್ಮಶಾಸ್ತ್ರವು ಕ್ಷಮೆ, ದಯೆ, ವಿವೇಕ ಇವುಗಳನ್ನು ಮುಕ್ತಿಯ ಸೋಪಾನಗಳೆಂದು ಕರೆದಿದೆ. ಪರರ ದುರ್ಗುಣಗಳನ್ನು ಮರೆತು ಅವರನ್ನು ಗೌರವಿಸಿದರೆ ಅವರು ಉತ್ತಮವಾಗುವುದು. ಕ್ಷಮೆಯಲ್ಲಿ ದುರ್ಗುಣವನ್ನು ಸುಗುಣವನ್ನಾಗಿ ಪರಿವರ್ತಿಸುವ ಶಕ್ತಿ ಇದೆ. ಯುವಕರು ದುಃಖಗಳೆರಡನ್ನು ಸಮಾನವಾಗಿ ಪಡೆಯಬೇಕು. ಸುಖ ಬಂದರೆ ಸಂತೋಷಪಡಬಾರದು, ದುಃಖ ಬಂದರೆ ಕುಗ್ಗಬಾರದು. ಇದು ಧೈರ್ಯವಂತ ಯುವಕನ ಲಕ್ಷಣವಲ್ಲ. ಸಮಚಿತ್ತದಿಂದ ಸುಖ-ದುಃಖಗಳನ್ನು ಎದುರಿಸಬೇಕು. ಗಾಂಧೀಜಿಯವರು ಬಾಲ್ಯದಲ್ಲಿ ಅರಿಯದೆ ಅನೇಕ ತಪ್ಪುಗಳನ್ನು ಮಾಡಿ ತಂದೆಯ ಎದುರಿಗೆ ಹೇಳಿಕೊಳ್ಳಲಾರದೆ ಪಶ್ಚಾತ್ತಾಪದಿಂದ ಪತ್ರ ಬರೆದು ತಿಳಿಸಿದರು. ಇದನ್ನು ನೋಡಿದ ತಂದೆ ಶಿಕ್ಷೆ ನೀಡಲಿಲ್ಲ. ಸುಮ್ಮನೆ ಕುಳಿತು ಕಣ್ಣೀರು ಹರಿಸಿದರು, ಇದುವೇ ಗಾಂಧೀಜಿಯವರ ಆತ್ಮಪರಿವರ್ತನೆಗೆ ಕಾರಣವಾಯಿತು. ತಂದೆಯ ಕ್ಷಮೆ ಮಗನನ್ನು ಮಹಾತ್ಮನನ್ನಾಗಿ ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸಿತು. ಇದನ್ನು ಯುವಶಕ್ತಿ ತಿಳಿದುಕೊಳ್ಳಬೇಕಾಗಿದೆ. ಈ ಕ್ಷಮೆ ಎಂಬ ಬತ್ತಳಿಕೆಯನ್ನು ಯಾವ ಯುವಕ ಹೊಂದಿರುವನೋ ಅವನಿಗೆ ಯಾವ ದುಷ್ಟಶಕ್ತಿ ಏನೂ ಮಾಡಲಾರದು. ಕಾರಣವೆಂದರೆ ಹುಲ್ಲಿಲ್ಲದ ಕಡೆ ಅಗ್ನಿ ಬೀಗ ತಾನಾಗಿಯೇ ಉರಿಯುವುದಿಲ್ಲವೋ ಹಾಗೆ ಕ್ಷಮಾ ಗುಣವನ್ನು ಹೊಂದಿರುವ ಯುವಕರು ದುಷ್ಟ ಪ್ರೇರಣೆಯ ಕಡೆ ನಡೆಯಬಾರದು. ಆಗ ಸ್ನೇಹಿತನಾಗುತ್ತಾನೆ. ಆದ್ದರಿಂದ ಯುವಕರ ಬಾಳಿನಲ್ಲಿ ಕ್ಷಮೆ ಅಮೂಲ್ಯ.

ತನ್ನನ್ನು ಬಣ್ಣಿಸಿಕೊಳ್ಳುವ, ಇತರರು ನನ್ನನ್ನು ಬಣ್ಣಿಸಲಿ ಎನ್ನುವ ಗುಣ ಯುವಕರಲ್ಲಿ ಇರಬಾರದು. ಇದರಿಂದ ಮನುಷ್ಯನ ವ್ಯಕ್ತಿತ್ವ ಬೆಳವಣಿಗೆಯಾಗದು. ಇನ್ನೊಬ್ಬರ ಟೀಕೆಯನ್ನು ತಲೆಬಾಗಿ ಸ್ವೀಕರಿಸಿ ತಪ್ಪನ್ನು ತಿದ್ದಿಕೊಳ್ಳುವ ದೊಡ್ಡಗುಣ ಅವರಲ್ಲಿರಬೇಕು. ಪರರ ಸಾಧನೆಯನ್ನು ಕಂಡು ಅಸೂಯೆ ಪಡುವುದಕ್ಕಿಂತಲೂ, ಆ ಸಾಧನೆ ಮುರಿಯುವ ಶಕ್ತಿ ತನ್ನಲ್ಲಿ ಅಳವಡಿಸಿಕೊಂಡು ಆ ಮೂಲಕ ಪ್ರಯತ್ನಶೀಲರಾಗಬೇಕು. ಇದರಲ್ಲಿಯೇ ಮನುಷ್ಯನ ಯಶಸ್ಸು ಅಡಗಿದೆ. ಮನುಷ್ಯ ಪರೋಪಕಾರಿಯಾಗಬೇಕು. ತಾನು ಬೆಳೆಯುವುದರ ಜೊತೆಗೆ ಸಮಾಜವನ್ನು ಬೆಳೆಸುವ ದೊಡ್ಡ ಗುಣ ಅವನದಾಗಬೇಕು. ಅನ್ಯರನ್ನು ಕಂಡು ಅಸೂಯೆ ಪಡುವುದಕ್ಕಿಂತಲೂ ತನ್ನನ್ನು ತಾನರಿತು ಬಾಳುವುದರಲ್ಲಿ ಶ್ರೇಯಸ್ಸಿದೆ. ಎನ್ನುವ ವಿಚಾರದಲ್ಲಿ ಕೊಲೂರರು ದೃಢನಂಬಿಕೆಯುಳ್ಳರಾಗಿದ್ದರು.

ಯುವಕರನ್ನು ಉದ್ದೇಶಿಸಿ ಕೊಲೂರರು ಹೀಗೆ ಹೇಳುತ್ತಿದ್ದರು. ಅರಿವೇ ಗುರು. ಅನುಭವವೇ ಜ್ಞಾನ. ಅರಿವು ಎಂದರೆ ತಿಳಿವು. ಕಣ್ಣು ಕಿವಿಗಳಿಗೆ ಸಿಗದೇ ಕೇವಲ ಸ್ಪರ್ಶದಿಂದ ಅನುಭವ ವೇದ್ಯವಾಗುವ ಜ್ಞಾನವು ಇದೆ. ಜಾಣನಾಗಲು ದೇಶಸುತ್ತಬೇಕು. ಇಲ್ಲವೇ ಕೋಶ ಓದಬೇಕು. ಎಂಬ ನಾಣ್ಣುಡಿಯಂತೆ ತನ್ನ ತಾನರಿಯದೆ ಕೇವಲ ತನ್ನ ಪರಿಸರದಿಂದ ಜ್ಞಾನ ಪಡೆಯಲು ಬಯಸಿದರೆ ಮೀನು ಹಿಡಿಯಲು ಹೋದ 12 ಜನ ಬುದ್ಧಿವಂತರ ಕಥೆಯಂತಾಗುತ್ತದೆ. ದಿನವೂ ಅಭಿವೃದ್ಧಿ ಹೊಂದುತ್ತಿರುವ ಈ ಪ್ರಪಂಚದಲ್ಲಿ ತನ್ನ ಆಗಮನದ ಅಂತರ್ಯ ನಿರ್ಗಮನದ ನಿಗೂಢವನ್ನು ಯುವಕರು ಮೊದಲು ಅರಿತು ಅದರಂತೆ ಬಾಳಿ ಬೆಳಗದಿದ್ದರೆ ಬರುವ ಬವಣೆಗಳಿಂದ ತಾನು ಬಾಳಿದ್ದು ಬರಿದೆನಿಸುತ್ತದೆ.

"ತನ್ನ ತಾನು ತಿಳಿದರೆ ಅದುವೆ ಆತ್ಮಜ್ಞಾನ. ಹೌದಪ್ಪ ಹೌದು ನೀನೇ ದೇವರು ನಿನ್ನನೀ ತಿಳಿದರೆ ನಿನಗಿಲ್ಲಾ ದೂರ," ಶ್ರೀ ಶಿಶುನಾಳ ಶರೀಫ್ ಸಾಹೇಬರು ಹೇಳಿದ ಮಾತಿನಲ್ಲಿ ಎಷ್ಟು ಅರ್ಥವಿದೆ. ನಮ್ಮ ದೇಹವೇ ದೇಗುಲ, ಕರ್ಮೇಂದ್ರಿಯಗಳೇ ಅಲ್ಲಿಯ ಕೆಲಸದಾಳುಗಳು, ಜ್ಞಾನೇಂದ್ರಿಯಗಳು ಮೇಲ್ವಿಚಾರಕರು, ಆತ್ಮವು ದೇವರು, ಆತ್ಮವು ನಿರ್ಗುಣ ನಿರಾಕಾರ ಸರ್ವವ್ಯಾಪಿ ಸದಾಶುದ್ಧ, ತನ್ನ ಬೆಳಕಿನಲ್ಲಿ ನಡೆಯುವ ಎಲ್ಲಾ ತರಹದ ಕಾರ್ಯಗಳಿಗೆ ದೀಪವು ಸಾಕ್ಷಿಯಾಗಿ ನಿಲ್ಲುವಂತೆ ಪಂಚೇಂದ್ರಿಯಗಳಿಂದ ಕರ್ಮೇಂದ್ರಿಯಗಳಿಂದ ನಾನಾ ಬಗೆಯ ಚಟುವಟಿಕೆಗಳಿಗೆ ಆತ್ಮವೂ ಸಾಕ್ಷಿಯಾಗಿ ನಿಲ್ಲುತ್ತದೆ. ಎಂಬುದನ್ನು ಯುವಕರು ಅರಿತುಕೊಳ್ಳಬೇಕಾಗಿದೆ.

ಹಳ್ಳದಲ್ಲಿ ಅಂತರ್ಜಲ ಇರುವಂತೆ ಎಲ್ಲರಲ್ಲಿಯೂ ತನ್ನನ್ನು ತಾನು ತಿಳಿಯಲು ಅವಶ್ಯಕವಾದ ಜ್ಞಾನವು ತಾನೇ ತಾನಾಗಿರುತ್ತದೆ. ಹೀಗಿದ್ದರೂ ಕೂಡ ತನ್ನನ್ನು ಕುರಿತು ಅನ್ಯರನ್ನು ಕೇಳುವುದು ಮಂಬ ತನವೆನಿಸುತ್ತದೆ. ಪಶು ಪಕ್ಷಿಗಳಾದಿಯಲ್ಲಿ ತಮ್ಮನ್ನು ತಾವು ತಿಳಿಯುವ ಶಕ್ತಿ ಇಲ್ಲ. ಆದರೆ ಮನುಷ್ಯ ಮಾತ್ರನಿಗೆ ಈ ಶಕ್ತಿ ಇದೆ. ಅದರ ಉಪಯೋಗ ಮಾಡಿಕೊಳ್ಳುವುದು ಯುವಕರ ಕರ್ತವ್ಯ. ಅರಿವು ಒಂದು ಅವ್ಯಕ್ತ ಶಕ್ತಿ. ಸೂರ್ಯಕಿರಣಗಳ ಸ್ಪರ್ಶವಾದೊಡನೆ ಕಮಲವು ಅರಳಿ ನಗುವಂತೆ ಅರಿವು ಆತ್ಮನ ಹಿರಿವು ಗುರುತಿಸುತ್ತದೆ.

ವ್ಯಕ್ತಿಯ ಕೆಲವು ಕೆಟ್ಟ ಗುಣಗಳಲ್ಲಿ ಚಾಡಿ ಹೇಳುವುದು ಯುಗ ಯುಗಾಂತರಗಳಿಂದ ಹರಿದು ಬಂದಿರುವ ಗುಣ. ಇದು ಅನೇಕ ದುರಂತಗಳಿಗೆ ಮೂಲ ಕೇಂದ್ರವಾಗಿದೆ. ಕ್ಷುಲ್ಲಕವಾದ ವೈಯಕ್ತಿಕ ಕಾರಣಗಳಿಂದ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುವ ದೃಷ್ಟಿಯಿಂದ ಎಷ್ಟೋ ಜನ ಅಮಾಯಕರಿಗೆ ಕಷ್ಟಕೊಡುತ್ತಾರೆ. ಸ್ವಾರ್ಥಕ್ಕಾಗಿ ಅನೇಕ ಜನರ ಜೀವನ ಕಮರಿ ಹೋಗಿದೆ. ಹಿಂದಿನ ಇತಿಹಾಸವನ್ನು ಅವಲೋಕಿಸಿದಾಗ ಇಂಥ ನೂರಾರು ನಿದರ್ಶನಗಳು ಕಂಡು ಬರುತ್ತವೆ. ದಾಸಿ ಮಂಥರೆಯ ಪ್ರಲೋಭನೆಯಿಂದ ಕೈಕೆ ರಾಮನನ್ನು ಕಾಡಿಗ ಹೋಗುವಂತೆ ಮಾಡಿ ಅನೇಕ ದುರಂತಗಳ ಸರಮಾಲೆಗೆ ಕಾರಣಗಳಾಗುವುದರ ಜೊತೆಗೆ ತನ್ನ ಉದ್ದೇಶ ಆಸೆ-ಆಕಾಂಕ್ಷೆಗಳು ಸಫಲವಾಗದೆ ತನ್ನ ಒಡಲಾಗ್ನಿಗೆ ತಾನು ಬಲಿಯಾಗುತ್ತಾಳೆ.

ಕೆಲವರು ಇನ್ನೊಬ್ಬರ ಸೃಜನಾತ್ಮಕ ಬೆಳವಣಿಗೆಯನ್ನು ಸಹಿಸಲಾಗದೆ ಅವರ ವ್ಯಕ್ತಿತ್ವಕ್ಕೆ ಮಸಿ ಬಳಿಯುವ ಹೀನ ಕಾರ್ಯಕ್ಕೆ ಕೈ ಹಾಕುತ್ತಾರೆ ಚಾಡಿ ಎಂಬ ಕ್ರೂರ ಬಾಣವನ್ನು ಪ್ರಯೋಗಿಸಿ ಕಲುಷಿತ ವಾತಾವರಣವನ್ನು ಸೃಷ್ಟಿಸುತ್ತಾರೆ. ಚಾಡಿ ಕ್ರಮೇಣ ಇದು ಅಪರಾಧಿ ವ್ಯಕ್ತಿಯ ಜೊತೆಗೆ ಚಾಡಿ ಹೇಳುವವರನ್ನು ಮತ್ತು ಕೇಳುವವರನ್ನು ಬಲಿ ತೆಗೆದುಕೊಳ್ಳುತ್ತದೆ. ಅದಕ್ಕಾಗಿ ಚಾಡಿಯೆಂಬ ಕೆಟ್ಟ ನಡತೆಯನ್ನು ಯುವಕರು ತಮ್ಮ ಬದುಕಿನಲ್ಲಿ ರೂಢಿಸಿ ಕೊಳ್ಳಬಾರದೆಂದು ಕಿವಿಮಾತು ಹೇಳುತ್ತಾರೆ.

ಚಾಡಿ ಹೇಳುವರು ನೆರೆಹೊರೆಯಲ್ಲಿಯೇ ಇರಬಹುದು. ಅಷ್ಟೇ ಏಕೆ ನಮ್ಮ ಮನೆಯಲ್ಲೂ ಇರಬಹುದು. ಇದು ವ್ಯಕ್ತಿಗಳ ಮಾನಸಿಕ ಮತ್ತು ಬೌದ್ಧಿಕ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತದೆ. ಇಂದಿನ ಯುವಕರು ಪ್ರತ್ಯಕ್ಷವಾದರೂ ಪ್ರಮಾಣೀಕರಿಸಿ ನೋಡುವ ಮನೋಭಾವವನ್ನೂ ಬೆಳೆಸಿಕೊಳ್ಳಬೇಕು. ಇದರಿಂದ ಒಬ್ಬ ಪ್ರಾಮಾಣಿಕ ವ್ಯಕ್ತಿಗೆ ನ್ಯಾಯ ದೊರಕಿಸಿ ಕೊಟ್ಟಂತಾಗುತ್ತದೆ.

ಇಂದು ಯುವಕರು ತಮ್ಮ ಎಂಥ ಆಸೆ ನೆರವೇರಿಸಲು ಸಾಧ್ಯವೋ ಅಂತಹ ಆಸೆ. ಆಕಾಂಕ್ಷೆಗಳನ್ನು ಇಟ್ಟುಕೊಳ್ಳಬೇಕು. "ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು". ಉದಾಹರಣೆಗ ಒಬ್ಬನು ಆಕಾಂಕ್ಷ ಕ್ಷೇತ್ರದಲ್ಲಿ ಪ್ರವೀಣನಾಗಿದ್ದು ವಿಜ್ಞಾನದ ಸ್ಪರ್ಧಾತ್ಮಕ ಪರೀಕ್ಷೆಗ ಸ್ಪರ್ಧಿಸಲು ಯತ್ನಿಸಬಾರದು. ಇದು ಅಸಾಧ್ಯ ಯತ್ನವಾಗುತ್ತದೆ. ಯುವಕರು ತಮ್ಮ ಶಕ್ತಿ ಸಾಮರ್ಥ್ಯದ ಬಗ್ಗೆ ಅತಿಯಾಗಿ ಭಾವಿಸಿಕೊಳ್ಳಬಾರದು. ಇದು ಆತ್ಮ ಕ್ಲೋಬೆಯನ್ನು ಮತ್ತು ಯಾತನೆಪಡುವಂತಹ ತೊಂದರಗಳನ್ನುಂಟು ಮಾಡಬಹುದು. ಚಿಕ್ಕವುಟ್ಟ ಆಸೆಗಳನ್ನು ಇರಿಸಿಕೊಂಡು ಜೀವನದಲ್ಲಿ ಏನನ್ನು ಸಾಧಿಸಬಲ್ಲರು?

ಮುಂಬರುವ ತೊಂದರೆಗಳನ್ನು ಆಲೋಚಿಸದೆ ತನ್ನ ಮನಸ್ಸಿಗೆ ತೋಚಿದ ಹಾಗೆ ಜೀವನ ಸಾಗಿಸುವಂಥವರಿಗ ತೊಂದರೆಗಳಾಗುವುದು ಖಚಿತ. ಹೀಗಾಗದಂತೆ ಯುವಕರು ಗಮನ ಹರಿಸಬೇಕು. ಅನೇಕ ತೊಂದರಗಳನ್ನು ಮೇಲಿಂದ ಮೇಲೆ ಅನುಭವಿಸುತ್ತಿದ್ದರೂ ಸಹ ಆತನು ನಾನು ದುರ್ದೈವಿ ಎಂದು ತಿಳಿಯುಕೊಳ್ಳಬಾರದು. ಎದುರಾದ ಸಮಸ್ಯೆಗಳನ್ನು ತಾನೇ ಧೈರ್ಯದಿಂದ

ಎದುರಿಸಬೇಕು. ಜೀವನವನ್ನು ಯಾರು ಪ್ರೀತಿಸುತ್ತಾರೋ ಅವರನ್ನು ಜೀವನ ಪ್ರೀತಿಸುತ್ತದೆ. ಇಂದಿನ ಯುವ ಪೀಳಿಗೆ ಇದನ್ನು ಅರಿಯುವುದು ಅವಶ್ಯವೆನಿಸುತ್ತದೆ.

ಯುವಕರು ಮಾತನಾಡುವಾಗ ವಿಚಾರಮಾಡಿ ಮಾತನಾಡಬೇಕು. ಅಂದಾಗ ಅದಕ್ಕೆ ಬೆಲೆ ಬರುತ್ತದೆ. ಒಂದು ಸುಂದರವಾದ ಹಾರ ಹಲವಾರು ಮುತ್ತುಗಳನ್ನೊಳಗೊಂಡು, ತನ್ನ ಸೌಂದರ್ಯದಿಂದ ನೋಡುವವರ ಕಣ್ಣುಗಳನ್ನು ತಣಿಸುತ್ತದೆ. ಅಂತೆಯೇ ನಮ್ಮ ಮಾತುಗಳಲ್ಲಿಯ ಪ್ರತಿ ಪದವು ಮುತ್ತಿನಂತೆ ಸುಂದರ ಮತ್ತು ಮೌಲ್ಯಾಧಾರಿತವಾಗಿರಬೇಕು. ವಾಕ್ಯದ ಸೊಬಗನ್ನು ಹೆಚ್ಚಿಸುವಂತಿರಬೇಕು. ಮಾಣಿಕ್ಯ ಸ್ವಯಂಪ್ರಕಾಶ ಹೊಂದಿ ಎಲ್ಲವನ್ನೂ ತೋರುವಂತೆ ನಮ್ಮ ಮಾತುಗಳಿರಬೇಕು. ಮನಸ್ಸಿನಲ್ಲೊಂದು ಬಾಯಿಯಲ್ಲೊಂದು ಕೃತಿಯಲ್ಲಿ ಮತ್ತೊಂದು ಮಾಡುತ್ತಾ ಮಾತಿನ ಮೋಡಿಯಲ್ಲಿ ನಾವು ತೊಡಗಬಾರದು. ಇದು ಸರಿಯಾದ ಕ್ರಿಯೆ ಆಗಲಾರದು. ಯುವಕರೇ ಸದಾ ಜನಮನವನ್ನು ಗೆಲ್ಲುವಂತಹ ನಡೆನುಡಿಗಳು ನಿಮ್ಮದಾಗಿರಬೇಕು.

ಯಾವಾಗಲೂ ಬೇರೆಯವರ ತಪ್ಪುಗಳನ್ನು ಎತ್ತಿ ತೋರಿಸುವ ಮುನ್ನ ನಿಮ್ಮ ತಪ್ಪುಗಳನ್ನು ತಿದ್ದಿಕೊಂಡು ಪರಿಶುದ್ಧರಾಗಬೇಕು. ನಾವೇ ಪರಿಶುದ್ಧರಾಗದೇ ಮತ್ತೊಬ್ಬರ ದೋಷಗಳನ್ನು ತಿದ್ದುವ, ಅವರಿಗೆ ಉಪದೇಶ ನೀಡುವ ನೈತಿಕ ಹಕ್ಕಾದರೂ ಎಲ್ಲಿಂದ ಬರುತ್ತದೆ. ಯುವಕರೇ ಮೊದಲು ನಿಮ್ಮ ನಡೆನುಡಿಗಳಲ್ಲಿ ಸಾಮರಸ್ಯ ತಂದು ಕೊಳ್ಳುವ ಪ್ರಯತ್ನ ಮಾಡಬೇಕು. ಸ್ವಚ್ಛ ಹಾಗೂ ಪ್ರಾಮಾಣಿಕ ಬದುಕಿಗೆ ಸಹಕಾರಿಯಾಗುವ ನೀತಿಗಳನ್ನು ಆಡಬೇಕು. ಮನೆಗೆ ಬಂದ ಅತಿಥಿಗಳೊಡನೆ ಹೇಗೆ ನಡೆದುಕೊಳ್ಳಬೇಕೆಂಬ ಪ್ರಾಮಾಣಿಕ ಜ್ಞಾನವಿರಬೇಕು. ಮನೆಗೆ ಬಂದವರನ್ನು ದೇವರಂತೆ ಕಂಡು ಗೌರವಿಸಬೇಕೆಂಬುದು ನಮ್ಮ ಸಂಸ್ಕೃತಿ. ಅದಕ್ಕೆ ಬದಲಾಗಿ ಮನೆಗೆ ಬಂದವರೊಂದಿಗೆ ಮುಖಕೊಟ್ಟು ಮಾತನಾಡದೇ ಸುಮ್ಮನೆ ಬಿಗಿದುಕೊಳ್ಳುವುದು ಸರಿಯಲ್ಲ. ಬಂದವರನ್ನು ಸತ್ಕರಿಸಲು ನಮ್ಮಲ್ಲಿ ಏನಾದರೂ ಇಲ್ಲವೆಂದರೆ ನಾಲ್ಕು ಸೌಜನ್ಯದ ಮಾತುಗಳನ್ನಾಡುವ ಗುಣವನ್ನು ರೂಢಿಸಿಕೊಳ್ಳಬೇಕು. ಬೆಲ್ಲವಿಲ್ಲದಿದ್ದರೇನು? ಬೆಲ್ಲದಂತಹ ನಾಲ್ಕು ಸಿಹಿ ಮಾತುಗಳನ್ನಾಡುವ ಅಭ್ಯಾಸವನ್ನಾದರೂ ಬೆಳೆಸಿಕೊಳ್ಳಬೇಕು. ಆದರೆ ಇದು ಇನ್ನೊಬ್ಬರಿಗೆ ಹಾನಿಯಾಗುವಂತದ್ದಾಗಿರಬಾರದು.

ಯುವಕರೇ ಅವಶ್ಯಕತೆಗಿಂತ ಹೆಚ್ಚಿಗೆ ಸಂಗ್ರಹಿಸುವ ದುರಾಸೆಯಿಂದ ದೂರವಿರಿ. ಇದರಿಂದ ಮತ್ತೊಬ್ಬರು ಬದುಕುವ ಹಕ್ಕನ್ನು ಕಸಿದುಕೊಂಡಂತಾಗುತ್ತದೆ. ಈ ಭೂಮಿಯಲ್ಲಿ ಶಾಂತಿ ಸಮಾಧಾನವಿಲ್ಲ. ವಿಶ್ವಕ್ಕೆ ಶಾಂತಿಯನ್ನು ಸಹ ಬಾಳ್ವೆಯನ್ನು ನೀಡಬೇಕಾದ ಧರ್ಮ ಪಟ್ಟಭದ್ರ ಸ್ವಾರ್ಥ ಜನತೆಯಿಂದ ವಿಕೃತಗೊಂಡು ನಿಂತಿದೆ. ಧರ್ಮದ ಹೆಸರಿನಲ್ಲಿ ಮೋಸ, ವಂಚನೆ, ಕೊಲೆ, ಸುಲಿಗೆ, ಸಾಮಾನ್ಯ ಜನತೆಯ ಶೋಷಣೆ ನಿರಂತರವಾಗಿ ನಡೆದಿದೆ. ಇದನ್ನು ತಪ್ಪಿಸಬೇಕಾದರೆ ಯುವಶಕ್ತಿ ಮುಂದಾಗಬೇಕಾಗಿದೆ. ಆ ನಿಟ್ಟಿನಲ್ಲಿ ಅವರು ಸಹಸ್ರಾರು ಶರಣರು ತೋರಿದ ತತ್ವದ ಆಚರಣೆಯನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕಾಗಿದೆ. ಅಂದಾಗ ಮಾತ್ರ ಆ ಸಮಸ್ಯೆಗಳಿಗೆ ತಕ್ಕ ಪರಿಹಾರ ಕಂಡುಕೊಳ್ಳಬಹುದು.

ಸಮಸ್ಯೆಯ ಪರಿವೆಯೇ ಇಲ್ಲ. 'ಬಡತನ ನೀಗಲಿ. ಬಹಳ ಮಕ್ಕಳಿರಲಿ, ಮಾತ್ರ ಗುರುವಿನ ದಯೆ ಇರಲಿ' ಎಂದು ಹೇಳಿ ತಾವು ನಿಶ್ಚಿಂತರಾಗುವುದು. ಹುಟ್ಟಿಸಿದ ದೇವರು ಹುಲ್ಲು ಮೇಯಿಸುವುದಿಲ್ಲ ಎಂಬ ಮೂಢ ನಂಬಿಕೆಯಿಂದ ಅವರು ಮುಂದುವರಿಯುತ್ತಿದ್ದಾರೆ. ಈ ಸಮಸ್ಯೆಯನ್ನು ಪರಿಹರಿಸುವಲ್ಲಿ ಇಂದಿನ ಯುವ ಜನಾಂಗದ ಜವಾಬ್ದಾರಿ ಅತಿಮಹತ್ವದ್ದಾಗಿದೆ. ಸುಶಿಕ್ಷಿತ ಯುವ ಜನಾಂಗವು ಇಂಥ ಹಳ್ಳಿಯ ಜನರ ಮನ ಒಲಿಸಿ ಜನಸಂಖ್ಯೆಯ ಹೆಚ್ಚಳದಿಂದ ಆಗುವ ಸಮಸ್ಯೆಯನ್ನು ಅವರಿಗೆ ಮನದಟ್ಟು ಮಾಡಬೇಕಾಗಿದೆ. ಕುಟುಂಬ ಯೋಜನಾ ಕಾರ್ಯದಲ್ಲಿ ಎಲ್ಲರೂ ಪಾಲ್ಗೊಳ್ಳುವಂತೆ ಅದನ್ನು ಅಕ್ಷರಶಃ ಅನುಷ್ಠಾನಕ್ಕೆ ತರುವಂತೆ ಪ್ರಯತ್ನಿಸಬೇಕಾಗಿದೆ ಎಂದು ಹೇಳಿದ್ದಾರೆ.

ನಮ್ಮ ದೇಶ ಹಳ್ಳಿಗಳ ನಾಡು. ಗ್ರಾಮೀಣ ಸಂಸ್ಕೃತಿ ನಮ್ಮ ಪರಂಪರೆಯಾಗಿದೆ. ನಮ್ಮ ದೇಶದ ವಿಶಾಲ ಜನಸಂಖ್ಯೆ ಗ್ರಾಮೀಣ ಸಂಸ್ಕೃತಿಗೆ ಅನುರೂಪವಾಗಿದೆ. ಆದ್ದರಿಂದ ನಮ್ಮ ದೇಶ ಸುಧಾರಣೆಯಾಗಬೇಕಾದರೆ ಮೊದಲು ಹಳ್ಳಿಗಳ ಸುಧಾರಣೆ ಆಗಬೇಕು. ಇದರಿಂದ ಗ್ರಾಮೀಣ ಸಂಸ್ಕೃತಿಯಲ್ಲಿನ ಕುಂದು ಕೊರತೆಗಳನ್ನು ನಿರ್ಮೂಲನಗೊಳಿಸಿ ಅದನ್ನು ಸುಧಾರಿಸಲು ಪ್ರಯತ್ನಿಸಬೇಕು. ಇದಕ್ಕಾಗಿ ದೇಶದಲ್ಲಿನ ಸುಶಿಕ್ಷಿತ ಯುವಕರು ಗ್ರಾಮಸ್ಥರ ಜೀವನವನ್ನು ಸುವ್ಯವಸ್ಥೆಗೊಳಿಸಲು ಪ್ರಯತ್ನಿಸಬೇಕು. ಶಾಲೆ ಕಾಲೇಜುಗಳಿಗೆ ರಜೆ ದೊರೆತಾಗಲೆಲ್ಲ ಗ್ರಾಮಗಳಿಗೆ ಹೋಗಿ ಅಲ್ಲಿನ ಸಮಸ್ಯೆಗಳನ್ನು ಬಿಡಿಸುವಲ್ಲಿ ನೆರವಾಗಬೇಕು.

ನಮ್ಮ ದೇಶದಲ್ಲಿ ಸಂಪನ್ಮೂಲ ಬೇಕಾದಷ್ಟಿದೆ. ಸಾಗುವಳಿಗೆ ಯೋಗ್ಯವಾದ ನೆಲವಿದೆ ಜನಸಂಖ್ಯಾಬಲವಿದೆ. ಪ್ರಾಕೃತಿಕ ಸಂಪತ್ತು ಹೇರಳವಾಗಿದೆ. ಆದರೆ ಇವೆಲ್ಲವುಗಳ ಸದುಪಯೋಗ ಮಾತ್ರ ಆಗುತ್ತಿಲ್ಲ. ನಮ್ಮ ದೇಶದ ರೈತರು ಸಾಮಾನ್ಯವಾಗಿ ಸಂಪ್ರದಾಯ ಶರಣರು. ನಿರಕ್ಷರಿಗಳು, ಧರ್ಮದಲ್ಲಿ ಅತಿ ನಂಬಿಕೆಯುಳ್ಳವರು. ಸಂಪ್ರದಾಯಕ್ಕೆ ಮಾರುಹೋದ ಅವರು ತಮ್ಮ ಒಕ್ಕಲುತನ ಪದ್ಧತಿಯನ್ನು ಸುಧಾರಿಸಲು ಮುಂದಾಗುವುದಿಲ್ಲ. ಆದ್ದರಿಂದ ಇಂದಿನ ಕೃಷಿ ಪದವೀಧರ ಯುವ ಜನಾಂಗವು ತಮ್ಮ ಶಿಕ್ಷಣ ಮುಗಿಸಿದ ನಂತರ ಹಳ್ಳಿಗಳಿಗೆ ಹಿಂದಿರುಗಿ ರೈತರ ಬೇಸಾಯದಲ್ಲಿ ನೆಲ ಉಳುವುದರಲ್ಲಿ, ಬೀಜ ಬಿತ್ತುವುದರಲ್ಲಿ, ಗೊಬ್ಬರ ಹಾಕುವುದರಲ್ಲಿ, ಅವೆಲ್ಲವನ್ನು ಉಪಯುಕ್ತವಾಗಿ ಬಳಸುವಲ್ಲಿ ಅರಿವು ಮೂಡಿಸಬೇಕು. ಹೆಚ್ಚು ಉತ್ಪಾದನೆ ಮಾಡುವುದನ್ನು ತೋರಿಸಿಕೊಡಬೇಕು. ಹಸಿರು ಕ್ರಾಂತಿಯನ್ನು ಉಂಟುಮಾಡುವುದು ಸುಶಿಕ್ಷಿತ ಯುವ ಜನಾಂಗದ ಕರ್ತವ್ಯವಾಗಿದೆ.

ಸ್ವಚ್ಛಂದವಾಗಿ ಹಾರಾಡುವ ಗಿಳಿಯನ್ನು ಪಂಜರದಲ್ಲಿಟ್ಟರೆ ಅದಕ್ಕೆ ನೆಮ್ಮದಿ ಸಿಗಲಾರದು. ಅದಕ್ಕೆ ಬೇಕು ನಕ್ಕು ನಲಿಯುವ ತನ್ನ ಪರಿಸರ. ಹಾಗೆಯೇ ಯುವಕರ ನಿಮ್ಮ ಚಿತ್ತಗಳಿಗೆ ಶಾಂತಿ, ತೃಪ್ತಿ, ಸಮಾಧಾನ ಸಿಕ್ಕಬೇಕಾದರೆ ಗೆಳೆಯ ಸಮುದಾಯದಿಂದ ಕೂಡಿರಬೇಕು. ಹೀಗಾಗ ಎಲ್ಲರೂ ಮನುಷ್ಯರು. 'ಕಾಯಕದ ಕಲ್ಪನೆ, [illegible]' ವಾಕ್ಯವನ್ನು ಸರಿಯಾಗಿ [illegible] ಅನುಭವಿಸಬೇಕಾಗುತ್ತದೆ. [illegible],

ಯೋಚಿಸಿದರೆ ಅರ್ಥವಾದೀತು. ಕೆಲವು ಜನ ತಮ್ಮ ತೃಪ್ತಿಗಾಗಿ, ನಾಲಿಗೆ ಚಪಲದ ತೀಟೆಗಾಗಿ ಬೇಟೆಯಾಡುವವರಿಗೆ ಗೊತ್ತಾಗದಂತೆ ಕೆಲವು ಜಾತ್ರೆಗಳಲ್ಲಿ ಹಬ್ಬ ಹರಿದಿನಗಳ ಹೆಸರಿನಲ್ಲಿ ಇವನ್ನೆಲ್ಲಾ ನಡೆಸಿಕೊಂಡು ಬಂದಿದ್ದಾರೆ. ಇದನ್ನು ಪ್ರತಿಭಟಿಸಲು ಮುಂದಾಗಿರಿ. ನಿಷ್ಪ್ರಯೋಜಕ ಕೆಲವಷ್ಟು ಕಾನೂನಿನ ಬೆಂಬಲವೂ ಇದೆ. ಯುವಕರೆಲ್ಲ ಒಂದಾಗಿ ಒಂದು ಸಂಘಟನೆಯನ್ನು ಕಟ್ಟಿದರೆ ಪ್ರಾಣಿಗಳ ಅರಣ್ಯಗಳಿಗೆ ಸಲ್ಲಿಸಿದಂತೆ ಒಳ್ಳೆಯದು. ಇದಕ್ಕಿಂತ ಪ್ರಮುಖವಾದದ್ದು ಹಿರಿಯರೊಂದಿಗೆ ಸಮಾಲೋಚಿಸಿ ಈ ತರಹದ ಚಟುವಟಿಕೆಗಳನ್ನು ನಿಲ್ಲಿಸಲು ವಿನಂತಿಸಿಕೊಳ್ಳಿ. ನಮ್ಮ ಹೊಲಗಳಲ್ಲಿ ಬೆಳೆಯುವ ಪ್ರಮಾಣಕ್ಕೆ ಸಹ ಇಲ್ಲದಿದ್ದರೆ ಕೊರತೆಯಾಗಿ ಬೆಳೆಯುವ ಹೊಲಗಳನ್ನೆಲ್ಲ ಬೀಳು ಬಿಡಬೇಕಾಗುತ್ತದೆ. ಕ್ರಮೇಣ ನಮ್ಮ ನೆಲಗಳು ಬೆಳೆಯುವ ನೆಲವಲ್ಲದೆ ಬರಿಯ ಹಳ್ಳ ಕೊಳ್ಳಗಳಲ್ಲಿ ಬದಲಾವಣೆಯಾಗುತ್ತವೆ.

ಪ್ರಕೃತಿ ಪ್ರೇಮ

ಪ್ರಕೃತಿಯ ಮುಂದೆ ಮಾನವನು ಕೇವಲ ಒಂದು ಸಣ್ಣ ಬರಿದ ಮಗು ಮಾತ್ರ. ಈ ಪ್ರಕೃತಿಯಿಲ್ಲದೆ ಮಾನವನ ಬದುಕೇ ಇಲ್ಲ. ನಮಗೆ ಬೇಕಾದ ನೀರು, ಉತ್ತಮ ಗಾಳಿ ಹಾಗೂ ಆಹಾರವನ್ನು ನೀಡುವ ಈ ದೈವದತ್ತ ಹಸಿರೇ ನಮ್ಮೆಲ್ಲರ ಉಸಿರು. ಇಂಥ ಹಸಿರನ್ನು ಉಳಿಸಿ ಬೆಳೆಸಬೇಕಾದದ್ದು ಇಂದಿನ ಯುವಕರೆಲ್ಲರ ಕರ್ತವ್ಯವಾಗಿದೆ.

ಪ್ರಕೃತಿಯನ್ನು ದೇವತೆ ಎನ್ನುತ್ತಾ ನಮ್ಮ ಪೂರ್ವಜರು ಋಷಿ ಮುನಿಗಳು ಪ್ರಕೃತಿಗಿಂತ ಮಿಗಿಲಾದ ದೇವರಿಲ್ಲ ಎಂದಿದ್ದಾರೆ. ಆದ್ದರಿಂದಲೇ ಅವರು ದಟ್ಟವಾದ ಕಾಡಿನಲ್ಲಿ ಪಶು ಪಕ್ಷಿ ಪ್ರಾಣಿಗಳೊಂದಿಗೆ ವಾಸ ಮಾಡುತ್ತಿದ್ದರು. ಹಸಿರು ವನದ ನಡುವೆ ತಂಪಾದ ಗಾಳಿ ಸೇವನೆ ತುಂಬಾ ಹಿತವಷ್ಟೇ ಅಲ್ಲ ಆರೋಗ್ಯಕ್ಕೂ ಉತ್ತಮವೆಂದು ಅವರಿಗೆ ತಿಳಿದಿತ್ತು.

ಇಂದಿನ ಯುವಕರು ಪ್ರಕೃತಿಗೆ ಮಹತ್ವವನ್ನು ನೀಡಬೇಕಾದುದು ಇಂದು ಅನಿವಾರ್ಯವಾಗಿದೆ ಎನ್ನುತ್ತಾರೆ. ಕಾಡಿದ್ದರೇ ಮೋಡ, ಮಳೆ ಬರಲು ಸಾಧ್ಯ. ಮರಗಿಡಗಳೇ ಮೋಡಗಳನ್ನು ಸೃಷ್ಟಿಸಿ ಮಳೆಯ ಸುರಿಸುವುವು. ಈ ಕಾರಣದಿಂದಲೇ ಹಿಂದಿನ ಕಾಲದಲ್ಲಿ ಸಮೃದ್ಧ ಮಳೆ ಆಗುತ್ತಿತ್ತು. ಅಂದು ನದಿ ತೊರೆಗಳು ತುಂಬಿ ಹರಿಯುತ್ತಿದ್ದವು. ಕೆರೆ ಕಟ್ಟೆಗಳು ತುಂಬಿ ತುಳುಕುತ್ತಿದ್ದವು. ರೈತರು ಸಂತೋಷದಿಂದ ಬಿತ್ತಿ ಸಮೃದ್ಧ ಬೆಳೆ ತೆಗೆಯುತ್ತಿದ್ದರು. ನೀರು ಆಹಾರಕ್ಕೆ ಯಾವುದೂ ಕೊರತೆಯಿರಲಿಲ್ಲ. ಜಾನುವಾರುಗಳೂ ಸಹ ಸಾಕಷ್ಟು ಹಸಿರು ಮೇವು ತಿನ್ನುತ್ತಿದ್ದವು. ಆದರೆ ಇತ್ತೀಚಿನ ದಶಕಗಳಲ್ಲಿ ನಾಗರೀಕತೆ ಹೆಚ್ಚಿದಂತೆಲ್ಲಾ ಮನುಷ್ಯನ ಆಸೆ ಅವಶ್ಯಕತೆಗಳೂ ಮಿತಿ ಮೀರಿ ಬೆಳೆಯುವುದರ ಜೊತೆಗೆ ಮಿತಿ ಮೀರಿ ಏರತೊಡಗಿರುವ ಜನಸಂಖ್ಯೆ ಮತ್ತು ಕೆಲವು ಸ್ವಾರ್ಥ ಸಾಧಕರಿಂದಾಗಿ ಅರಣ್ಯನಾಶ ಪ್ರಾರಂಭವಾಯಿತು. ಎಂದು ಖೇದ ವ್ಯಕ್ತಪಡಿಸುತ್ತಾರೆ.

ಇಂದು ಯುವಶಕ್ತಿ ಇವನ್ನು ತಡೆಯುವುದು ಅವಶ್ಯವಿದೆ. ಒಂದು ಮರವನ್ನು ಕಡಿಯುವ ಮೊದಲು ಆ ಜಾಗದಲ್ಲಿ ಒಂದು ಸಸಿಯನ್ನು ನೆಡಬೇಕು. ಇದು ಇಂದಿನ ಯುವಕರ ಕರ್ತವ್ಯವಾಗಬೇಕು. ಇಲ್ಲದಿದ್ದಲ್ಲಿ ಪ್ರಕೃತಿಯ ಅಸಮತೋಲನಕ್ಕೆ ನಾವೇ ಕಾರಣರಾದಂತಾಗುತ್ತದೆ.

ಪ್ರಕೃತಿ ಮನುಷ್ಯನಿಗೆ ದೇವರು ಕೊಟ್ಟವರ ಪ್ರಕೃತಿ ನಾಶಿದರೆ ಮನುಷ್ಯನಿಗೆ ಉಳಿಗಾಲವಿಲ್ಲ. ಹೀಗಾಗದಿರುವಂತೆ ಕಾಪಾಡಬೇಕಾದರೆ ಸರ್ಕಾರದ ಕಡೆ ಬೆರಳು ಮಾಡುವುದನ್ನು ಬಿಟ್ಟು ಪ್ರತಿಯೊಬ್ಬ ಯುವಕರು ಕನಿಷ್ಠ ಎರಡು ಮರ ಬೆಳೆಸುವ ಜವಾಬ್ದಾರಿಯನ್ನು ಹೊರಬೇಕು. ಹನಿ ಹನಿಗೂಡಿದರೆ ಹಳ್ಳ ಎಂಬ ಗಾದೆಯ ಮಾತಿನಂತೆ ನಾವು ನೆಡುವ ಎರಡೆರಡು ಮರಗಳು ಇನ್ನು ಕೆಲವೇ ವರ್ಷಗಳಲ್ಲಿ ನಮ್ಮ ಬದುಕನ್ನು ಸಮೃದ್ಧಗೊಳಿಸಬಲ್ಲವು.

ಮರವಿದ್ದರೆ ಮಳೆ. ಕಾಡಿದ್ದರೆ ನಾಡು. ಎರಡೂ ಇಲ್ಲದಿದ್ದರೆ ನಮ್ಮ ಈ ನೆಲ ಜಲ ಎಲ್ಲವೂ ಬರಡು ಎಂಬ ಸತ್ಯವನ್ನು ಪ್ರತಿಯೊಬ್ಬರೂ ಅರಿಯುವುದು ಇಂದು ಅವಶ್ಯವಿದೆ. ನಮ್ಮ ಜಲ ಸಂಪತ್ತು, ಕೃಷಿ ಸಂಪತ್ತನ್ನು ಅಭಿವೃದ್ಧಿಪಡಿಸಲು ಯುವಕರು ಶ್ರಮಿಸಬೇಕಾಗಿದೆ. ಆಗ ಕೋಗಿಲೆ ಕಾಡಿನಲ್ಲಿ ಮಾತ್ರವಲ್ಲ ನಮ್ಮ ನಿಮ್ಮ ಮನೆಗಳ ಮುಂದೆಯೂ ತನ್ನ ಮಧುರ ಕಂಠದಿಂದ ಹಾಡುತ್ತದೆ. ಕಾಡಿನಲ್ಲಿಯಷ್ಟೇ ನಕ್ಕು ನಲಿಯುವ ವಸಂತ ನಮ್ಮ ನಿಮ್ಮೆಲ್ಲರ ಮನೆಗಳ ಮುಂದೆ ತಳಿರು ತೋರಣಗಳಿಂದ ನಲಿದಾಡುತ್ತಾನೆ. ಪಶು ಪಕ್ಷಿ ಪ್ರಾಣಿಗಳಿಗೆ ಹಾಗೂ ಮನುಷ್ಯನ ಉಳಿವಿಗಾಗಿಯೇ ಜನ್ಮ ತಳೆದಿರುವ ಈ ಸಂಪದ್ಭರಿತ ಹಸಿರೇ ನಮ್ಮ ಉಸಿರು. ಮರಗಳನ್ನು ಬೆಳೆಸುವ ಉಳಿಸುವ ಜವಾಬ್ದಾರಿ ಕೇವಲ ಹಳ್ಳಿಗಳದ್ದು ಎಂತಲೋ ಅಥವಾ ಸರಕಾರದ್ದು ಎಂತಲೋ ತಿಳಿದು ಈ ಬಗ್ಗೆ ಯೋಚನೆಯನ್ನೇ ಮಾಡದವರು ಪಟ್ಟಣದ ಜನ.

ಆದರೆ ವಾಸ್ತವವಾಗಿ ಹೆಚ್ಚು ಹಾನಿಕಾರಕ ವಾಯುವನ್ನು ಸೇವಿಸುತ್ತಿರುವವರೂ ತಾವೇ ಎಂಬುದನ್ನು ನೆನಪಿಡಬೇಕು. ಯುವಕರೇ ಹಣದಿಂದ ಏನು ಬೇಕಾದರೂ ಕೊಳ್ಳಬಹುದು ಎಂಬ ಭ್ರಮೆಯಿಂದ ಹೊರಗೆ ಬರಬೇಕಾಗಿದೆ. ತಮ್ಮ ಕಾರು, ಸ್ಕೂಟರು, ಷಡ್ಡಿಗ ಲಕ್ಷುರಿ ನಾಯಿಗಳನ್ನು ಸಾಕುವ ಮನೆಗೆಂದು ಪ್ರತ್ಯೇಕ ಜಾಗವನ್ನು ಮೀಸಲಿಡುವ ಜನರು, ಬಾಡಿಗೆಗೆಂದೇ ಇಂಚಿಂಚು ಜಾಗವನ್ನು ಲೆಕ್ಕ ಹಾಕುವ ಜನರು ಮರಗಳಿಗೂ ಸ್ಥಳಾವಕಾಶ ನೀಡಬೇಕಾಗಿದೆ. ಬಾಡಿಗೆದಾರನಿಗೆ ವಾಸಕ್ಕೆ ಮನೆಯಿದ್ದರಷ್ಟೇ ಸಾಲದು ಅವರಿಗೆ ಶುದ್ಧವಾದ ಗಾಳಿಯೂ ಸಿಗುವಂತೆ ಎಚ್ಚರಿಕೆ ವಹಿಸುವುದು ಮಾಲಿಕರ ಕರ್ತವ್ಯವಾಗಿದೆ.

## ಶೈಕ್ಷಣಿಕ ವಿಚಾರಗಳು

ವಿದ್ಯಾರ್ಥಿ ಒಂದು ಶಕ್ತಿ ಭರದಿಂದ ಮುಂದೆ ಸಾಗುವ ಬೃಹತ್ ವಾಹಿನಿ. ಈ ಶಕ್ತಿಯನ್ನು ಸಮರ್ಥವಾಗಿ ಬಳಸಿಕೊಳ್ಳುವುದು. ಶಿಕ್ಷಕರ ಕೈಯಲ್ಲಿ ಇದೆ. ದಿನದಿಂದ ದಿನಕ್ಕೆ ಪ್ರಾಥಮಿಕ ಹಾಗೂ ಉನ್ನತ ಶಿಕ್ಷಣದ ಗುಣಮಟ್ಟ ಇಂದು ಕುಸಿಯುತ್ತಿರುವುದು ಅತ್ಯಂತ ವ್ಯಾಕುಲದಿಂದ ಗಮನಿಸಬಹುದಾಗಿದೆ. ಬೋಧನೆಯಲ್ಲಿ ಬೋಧಕರಿಗೆ ಆಸಕ್ತಿ ಉಳಿದಿಲ್ಲ. ವಿದ್ಯಾರ್ಥಿಗಳಿಗಂತು ಮೊದಲೇ ಇಲ್ಲ. ಅಧ್ಯಾಪಕರ ಪಾಠ ನಡೆಯುತ್ತಿರುವಾಗಲೇ ವಿದ್ಯಾರ್ಥಿಗಳು ಲಕ್ಷ್ಯ ಕೊಡದೇ ಇರುವುದು ಇಂದು ಸಾಮಾನ್ಯವಾಗಿದೆ. ಅಧ್ಯಾಪಕರ ಮಾತಿಗೆ ವ್ಯಂಗ್ಯ, ಲೇವಡಿ ಸಹಿತ ಅಶ್ಲೀಲವಾಗಿ

ಪ್ರತಿಕ್ರಿಯಿಸುವವರನ್ನು ಕಾಣಬಹುದು- ಕೇಳಬಹುದು. ಇಂದಿನ ಮಕ್ಕಳೇ ನಾಳಿನ ನಾಗರಿಕರು ಎಂಬ ತತ್ವಕ್ಕೆ ಅರ್ಥವೇ ಬರುವುದಿಲ್ಲ. ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ? ಎಂಬಂತೆ ಬಾಲ್ಯದಲ್ಲಿ ಮಗು ಉತ್ತಮ ಸಂಸ್ಕಾರಗಳನ್ನು ಹೊಂದಿರದಿದ್ದರೆ ಮುಂದು ಸಮಾಜಕ್ಕೆ ಮಾರಕವಾಗಬಹುದು. ಈ ದಿಶೆಯಲ್ಲಿ ಇಂದಿನ ಪೀಳಿಗೆ ವಿಕೃತ ಪಾಶ್ಚಾತ್ಯ ಸಂಸ್ಕೃತಿಯ ದಾರಿಯನ್ನು ತುಳಿಯದಂತೆ ಮಾಡುವುದು ಅವರ ಮೇಲಿರುವ ಗುರುತರವಾದ ಜವಾಬ್ದಾರಿಯಾಗಿದೆ ಎನ್ನುತ್ತಿದ್ದಾರೆ ಹಿರಿಯರು.

ಇಂದು ವಿದ್ಯಾರ್ಥಿ ಶಿಕ್ಷಕರ ಪಾಡು ನಿಜಕ್ಕೂ ಶೋಚನೀಯ. ಬೋಧನಾ ವಿಷಯದ ಆಳ ಅಗಲ ತಿಳಿದಿಲ್ಲ. ಭಾಷೆಯ ಮೇಲೆ ಪ್ರಭುತ್ವವಿಲ್ಲ. ಪ್ರಸ್ತುತಪಡಿಸುವ ವಿಷಯಗಳಲ್ಲಿ ಸ್ಪಷ್ಟತೆ ಇಲ್ಲ. ನೂರಾರು ಎಳೆಯ ವಿದ್ಯಾರ್ಥಿಗಳು ಬಲಿಪಶುಗಳು. ಆದ್ದರಿಂದ ನಮ್ಮಲ್ಲಿ ಶಿಕ್ಷಕರಿಗೆ ಭಾಷೆ, ಸಂವಹನ, ಮಾನವ ಸಂಬಂಧಗಳ ಬಗೆಗೆ ಕಣ್ಣು ತೆರೆಸುವ ಕಮ್ಮಟಗಳ ಶಿಬಿರಗಳ ಅಗತ್ಯವಿದೆ ಎನಿಸುತ್ತದೆ. ಶಾಲಾ ಅಧ್ಯಾಪಕರ ನೇಮಕಾತಿಯಲ್ಲಿ ಯಾವುದೇ ರಾಜಕೀಯ, ಹಣದ ಪ್ರಭಾವಕ್ಕೆ ಎಡೆಯಿಲ್ಲದಂತಾಗಬೇಕು. ಆಡಳಿತ ಮಂಡಳಿಯವರು ಎಚ್ಚರ ವಹಿಸಬೇಕು. ಶಿಕ್ಷಕರ ಹುದ್ದೆಗಳು ಮಾರಾಟವಾಗಬಾರದು. ಈ ಕೆಟ್ಟ ಪದ್ಧತಿ ನಿಂತು ಅಧ್ಯಾಪಕರ ಸ್ವಂತಿಕೆ, ಕ್ರಿಯಾಶೀಲ ವ್ಯಕ್ತಿತ್ವ, ಬುದ್ಧಿ ಮತ್ತು ಅಭಿವ್ಯಕ್ತಿ ಸಾಮರ್ಥ್ಯಕ್ಕೆ ಅಗ್ರಮಾನ್ಯತೆ ಸಲ್ಲಬೇಕು.

ವಿಷಯದ ಆಳ-ಅಗಲ ತಿಳಿದು ವಿದ್ಯಾರ್ಥಿಗಳನ್ನು ಪ್ರಚೋದಿಸಬಲ್ಲ ಶಿಕ್ಷಕರಿಗೆ ಹುದ್ದೆಗಳು ಲಭ್ಯವಾಗುವಂತಾಗಬೇಕು. ಅಂದಾಗ ಮಾತ್ರ ಕುಸಿಯುತ್ತಿರುವ ಶಿಕ್ಷಣ ಮಟ್ಟ ಎತ್ತರಿಸಬಹುದು. ಇಲ್ಲವಾದರೆ ನಮ್ಮ ಯುವ ಜನಾಂಗದ ಭವಿಷ್ಯ ಹಾಳಾಗುವುದು ಖಂಡಿತ. ಇಂದು ನಾವೆಷ್ಟು ಕಲಿಯುತ್ತೇವೆ ಎನ್ನುವುದಕ್ಕಿಂತ ಹೇಗೆ ಕಲಿಯುತ್ತೇವೆ ಎಂಬುದೂ ಮುಖ್ಯ.

ನಮ್ಮ ಮಕ್ಕಳ ಭಾವಿ ಕಲ್ಯಾಣಕ್ಕಾಗಿ ಶಾಲೆ ಕಾಲೇಜು ಅಗತ್ಯವಿದೆ ನಿಜಕ್ಕೂ ನಾವು ಮನಗಾಣುವುದಾದರೆ ತರಗತಿಯ ಬೋಧನಾ ಮಟ್ಟವನ್ನು ಎತ್ತರಿಸುವ ಕಾರ್ಯದಲ್ಲಿ ತೊಡಗಲೇ ಬೇಕು. ಆಡಳಿತಜ್ಞರು ಶಿಕ್ಷಣವಂತರು ಗಂಭೀರವಾಗಿ ಅಂತರ್‌ವೀಕ್ಷಣ ಮಾಡಿಕೊಂಡು ಸ್ವವಿಮರ್ಶೆಗೊಳಪಟ್ಟು ಮುನ್ನಡೆಯುವ ಕಾಲ ಇದು.

ಮನುಷ್ಯನ ವ್ಯಕ್ತಿತ್ವದ ಬೆಳವಣಿಗೆಗೆ ಒಳ್ಳೆಯ ಹವ್ಯಾಸಗಳು ಅತ್ಯವಶ್ಯಕ ಎಂಬ ಉಕ್ತಿ ಅರ್ಥಪೂರ್ಣವಾದುದು. ಒಳ್ಳೆಯ ಕಾಲ ನಿರ್ಮಾಣವಾಗಲೂ ಒಳ್ಳೆಯ ಹವ್ಯಾಸಗಳು ಬೇಕು. ಚಿಕ್ಕಂದಿನಿಂದಲೇ ಒಳ್ಳೆಯ ಹವ್ಯಾಸಗಳನ್ನು ರೂಢಿಸಿಕೊಳ್ಳಬೇಕು. ಕುಡಿತವು ಇಂದು ನಮ್ಮ ಸಮಾಜದಲ್ಲಿ ಒಂದು ಫ್ಯಾಶನ್ ಆಗಿಬಿಟ್ಟಿದೆ. ಕುಡಿಯದೇ ಇರುವ ಮನುಷ್ಯ ಅನಾಗರೀಕ, ದಡ್ಡ, ಏನೂ ತಿಳಿಯದವನು ಎಂಬ ಭಾವನೆ ಬೇರೂರುತ್ತ ನಡೆದಿದೆ.

ಕುಡಿತದಿಂದಾಗಿ ಇಂದು ವ್ಯಕ್ತಿ ಮನೆ ಮಠಗಳನ್ನು ಕಳೆದುಕೊಂಡು ಹೆಂಡತಿ ಮಕ್ಕಳನ್ನು ಬೀದಿ ಪಾಲು ಮಾಡಿ ಅನಾಥವಾಗಿ ಹುಚ್ಚನಂತೆ ಅಲೆಯುತ್ತಿರುವ ಪ್ರಸಂಗಗಳನ್ನು ನೋಡಬಹುದು.

ವ್ಯಕ್ತಿಯ ನಡೆ ನುಡಿ ನೀತಿಯಲ್ಲಿ ಸೇರಿಕೊಂಡಿದೆ. ಮಗುವಿಗೆ ಶಿಕ್ಷಣವನ್ನು ಕೊಡುವುದು ಕೇವಲ ಬುದ್ಧಿವಂತರನ್ನಾಗಿ ಮಾಡುವುದಕ್ಕಲ್ಲ. ಅವರನ್ನು ನೀತಿವಂತರನ್ನಾಗಿ ಹಾಗೂ ಸದ್ಗುಣವಂತರನ್ನಾಗಿ ಮಾಡಲಿಕ್ಕಾಗಿ, ವ್ಯಕ್ತಿಗೆ ಜ್ಞಾನ ಸಂಪತ್ತಿಗಿಂತ ನಡತೆಯೇ ಮುಖ್ಯ ಎಂಬುವುದು ಅರಿಯಬೇಕಾಗಿದೆ. ಇಂದಿನ ಯುವಕರು ಸ್ವಾಮಿ ವಿವೇಕಾನಂದರ ಮಾತಿನಲ್ಲಿ ಹೇಳುವುದಾದರೆ ವ್ಯಕ್ತಿಯು ಇಡೀ ಗ್ರಂಥ ಭಂಡಾರದ ಸಾರವನ್ನೆಲ್ಲ ಹೀರಿದರೂ ನಡುವಳಿಕೆ ಇಲ್ಲದೆ ಹೋದರೆ ಅವನು ಗಳಿಸಿದ ಜ್ಞಾನವೆಲ್ಲ ನಿರರ್ಥಕ. ನೀತಿಯು ವ್ಯಕ್ತಿಯ ವ್ಯಕ್ತಿತ್ವವನ್ನು ವಿಕಸಿತಗೊಳಿಸುತ್ತದೆ. ನೀತಿಯನ್ನು ಕಳೆದುಕೊಂಡವ ಸಮಾಜದಲ್ಲಿ ನೆಮ್ಮದಿಯಿಂದ ಬಾಳಲಾರ, ರೀತಿ-ನೀತಿಗಳನ್ನು ಎಲ್ಲರೂ ಅರಿತುಕೊಂಡು ಅದರಂತೆಯೇ ಕುಟುಂಬದಲ್ಲಿ, ಸಮಾಜದಲ್ಲಿ ಸಾಮರಸ್ಯದಿಂದ ನಡೆದುಕೊಳ್ಳುವುದು ಮಾನವನ ಆದ್ಯ ಕರ್ತವ್ಯ ಎಂದು ಕೊಲೂರರಗು ಹೇಳುತ್ತಿದ್ದರು.

ಪ್ರತಿಯೊಬ್ಬ ಯುವಕ ನೀತಿವಂತನಾಗಿ ಬಾಳಬೇಕು. ನೈತಿಕತೆಯನ್ನು ಅರಿತುಕೊಂಡು ಪ್ರಜ್ಞಾವಂತರಾಗಿ ಬಾಳಿದರೆ ಯುವಕರು ಬದುಕಿನಲ್ಲಿ ವಿಜಯಿಯಾಗಬಹುದು. ಹೆಣ್ಣು, ಹೊನ್ನು, ಮಣ್ಣು ಇವಾವೂ ಮಾಯೆಯಲ್ಲ. ನಮ್ಮ ನಮ್ಮ ಮನದ ಆಸೆಯೇ ಮಾಯೆ. ಈ ಆಸೆಯನ್ನು ಗೆಲ್ಲಬೇಕು. ಆಶೆಯನ್ನು ಗೆದ್ದವನು ಈಶತ್ವಕ್ಕೆ ಸಮ ಎಂದು ಹೇಳುತ್ತಾರೆ ಶರಣರು. ಇಷ್ಟೆ ಅಲ್ಲ ಮಾತೃದೇವೋಭವ ಎಂದು ಹೆಣ್ಣಿಗೆ ದೇವತೆಯ ಸ್ಥಾನವನ್ನು ಕಲ್ಪಿಸಿಕೊಟ್ಟ ಸಂಸ್ಕೃತದ ಸಾಲುಗಳನ್ನು ಇಲ್ಲಿ ಉದಾಹರಿಸಬಹುದು. ಹೆಣ್ಣು ಮಕ್ಕಳನ್ನು ಹೆತ್ತು ಆ ಮಕ್ಕಳಿಗಾಗಿ ಆಕೆ ನೀಡುವ ಸಂಸ್ಕಾರ, ತ್ಯಾಗ ಬಹು ಹೆಚ್ಚಿನವು. ಹಾಗೆ ನೋಡಿದಾಗ ಮನೆಯೇ ಮಗುವಿಗೆ ಮೊದಲು ಪಾಠಶಾಲೆ, ತಾಯಿಯೇ ಮಗುವಿಗೆ ಮೊದಲ ಶಿಕ್ಷಕಿ ಎಂಬುದು ಸತ್ಯಕ್ಕೆ ಬಹು ಹತ್ತಿರವಾದ ಮಾತು. ಮಾಂಸದ ಮುದ್ದೆಯಾಗಿ ಕೇವಲ ಉಸಿರೊಂದನ್ನು ಪಡೆದು ಹೊರಬಂದ ಕೂಸಿಗೆ ತನ್ನ ಸರ್ವಸ್ವವನ್ನು ಧಾರೆ ಎರೆದು ತನ್ನ ಎದೆಯ ಅಮೃತನ್ನಿಕ್ಕಿ ಕಾಪಾಡುತ್ತಾಳೆ.

ಅದಕ್ಕಾಗಿಯೇ ಹಿರಿಯರು ತಾಯಿ ಮೊಲೆ ಹಾಲು ಕ್ಷೀರ ಸಾಗರದ ನೆಲೆ ಎಂದಿದ್ದಾರೆ. ಈ ರೀತಿ ತನ್ನ ಮಗುವನ್ನು ಲಾಲಿಸಿ, ಪಾಲಿಸಿ ನಕ್ಕು ನಗಿಸಿ ಉಣಿಸಿ ಕುಣಿಸಿ ಈ ಬದುಕಿನ ಒಂದೊಂದು ಪಾಠವನ್ನು ತಿಳುವಳಿಕೆಯನ್ನು ಜ್ಞಾನವನ್ನು ಆಕೆ ಹೇಳಿಕೊಟ್ಟು ಮೊದಲು ಅವನನ್ನು ಮಾನವನನ್ನಾಗಿ ಮಾಡುತ್ತಾಳೆ. ಹೀಗೆ ಮಾಡಿದಾಗ ತಾಯಿ ಎಂಥ ಶಿಕ್ಷಕಿ ಗುರು ಎಂಬುದನ್ನು ನಾವು ಇದರಿಂದ ತಿಳಿದುಕೊಳ್ಳಹುದು. ನಮ್ಮನ್ನು ಮೊದಲು ಮಾನವನನ್ನಾಗಿ ಮಾಡಿದ ಮಹಾಮಾತೆ ತಾಯಿ ಅಲ್ಲವೆ? ಆಕೆಯನ್ನು ಗೌರವಿಸುವುದು. ನಮ್ಮ ಧರ್ಮ ಎಂಬುದನ್ನು ನೆನಪಿಟ್ಟುಕೊಳ್ಳಿ ಎನ್ನುತ್ತಿದ್ದರು ಕೊಲೂರು.

ಕೊಲೂರು ಮಲ್ಲಪ್ಪನವರು ಜ್ಞಾನವೃದ್ಧರು. ವಯೋವೃದ್ಧರು ಹಾಗೂ ಅಪ್ಪಟ ಗಾಂಧಿವಾದಿಗಳಾಗಿದ್ದರು. ಇವರು ಕೊಟ್ಟ ಸಲಹೆ ಸೂಚನೆ ನಮ್ಮ ಯುವಶಕ್ತಿಯ ಹೃದಯ ಸೇರಲಿ, ಅದು ಹೋರಾಟದ ಸಾಗರವಾಗಿ ಹೊರಹೊಮ್ಮಲಿ ಎಂದು ಅವರ ವಿಚಾರ-ಆಚಾರಗಳನ್ನು ನಮ್ಮ ಬದುಕಿನಲ್ಲಿ ಅಳಡಿಸಿಕೊಂಡರೆ ನಮ್ಮ ಬದುಕು ಸಾರ್ಥಕವಾದೀತು.

ಅಲ್ಪಜ್ಞಾನಿ ಪ್ರಕೃತಿ ಸ್ವಭಾವಿ, ಮಧ್ಯಮಜ್ಞಾನಿ ವೇಷಧಾರಿ,
ಅತೀತಜ್ಞಾನಿ ಆರೂಢ. ಆರೂಢನನಾರೂ ಅರಿಯ ಬಾರದಯ್ಯಾ
ಜ್ಞಾನವನರಿಯದಾತ ಅಜ್ಞಾನಿ, ನಾಮನಷ್ಟ
ಈ ಚತುರ್ವಿಧದೊಳಗೆ ಆವಂಗವೂ ಇಲ್ಲ,
ಗುಹೇಶ್ವರಾ ನಿಮ್ಮ ಶರಣ.

- ಅಲ್ಲಮ ಪ್ರಭು

ಓದಿನ ಹಿರಿಯರು, ವೇದದ ಹಿರಿಯರು, ಶಾಸ್ತ್ರದ ಹಿರಿಯರು,
ಪುರಾಣದ ಹಿರಿಯರು, ವೇಷದ ಹಿರಿಯರು, ಭಾಷೆಯ ಹಿರಿಯರು,
ಇವರೆಲ್ಲರು ತಮ್ಮ ತಮ್ಮನೆ ಮೆರೆದರಲ್ಲದೆ ನಿಮ್ಮ ಮೆರೆದುದಿಲ್ಲ.
ತಮ್ಮ ಮರೆದು ನಿಮ್ಮ ಮೆರೆದಡೆ ಕೂಡಿಕೊಂಡಿಪ್ಪ
ನಮ್ಮ ಕೂಡಲ ಸಂಗಮದೇವರು.

- ಬಸವಣ್ಣ

# ಸ್ವಾತಂತ್ರ್ಯ ಹೋರಾಟದಲ್ಲಿ ಕೊಲೂರು ಮಲ್ಲಪ್ಪನವರ ಪಾತ್ರ

## ಗಾಂಧೀಜಿಯವರ ದರ್ಶನ

1934ನೇ ಇಸ್ವಿ ಮಲ್ಲಪ್ಪನವರ ಜೀವನದಲ್ಲಿ ಒಂದು ಮಹತ್ವದ ಅಧ್ಯಾಯವೆಂದು ಹೇಳಬಹುದು. ಗಾಂಧೀಜಿಯವರ ದರ್ಶನ ಭಾಗ್ಯ ಲಭಿಸಿದ ವರ್ಷವೇ ಅದಾಗಿದೆ. ಭಾರತದ ಸ್ವಾತಂತ್ರ್ಯಕ್ಕಾಗಿ ಗಾಂಧೀಜಿಯವರ ನಾಯಕತ್ವದಲ್ಲಿ ಅಂದು ಹೋರಾಟ ನಡೆದಿದ್ದಾಗ ಅದರ ಬಿಸಿ ಹೈದ್ರಾಬಾದ್ ಪ್ರದೇಶಕ್ಕೂ ತಟ್ಟಿ ಮಲ್ಲಪ್ಪನವರನ್ನು ಸ್ವಾತಂತ್ರ್ಯ ಹೋರಾಟದ ಕಡೆ ವಾಲಿಸಿತು. ಅಷ್ಟೋತ್ತಿಗಾಗಲೇ ಮಲ್ಲಪ್ಪನವರು ಗಾಂಧೀಜಿಯವರ ವಿಚಾರಗಳನ್ನು ಕೇಳಿ ತಿಳಿದುಕೊಂಡಿದ್ದರು. ಅವರು ಈ ಮಹಾಪುರುಷನ ಭೇಟಿಯಾಗಬೇಕು, ಅವರಿಂದ ಆಶೀರ್ವಾದಪಡೆಯಬೇಕು ಎಂಬುವ ತವಕದಲ್ಲಿದ್ದರು.

ಇಷ್ಟೊತ್ತಿಗಾಗಲೇ ಜನಾರ್ದನರಾವ್ ದೇಸಾಯಿ ಮತ್ತು ಮಲ್ಲಪ್ಪನವರಿಗೆ ಆತ್ಮೀಯ ಸಂಬಂಧ ಬೆಳೆದುಬಂದಿತ್ತು. ಆಗ ಜನಾರ್ದನರಾವ್ ದೇಸಾಯಿ ವಕೀಲರಾಗಿದ್ದು ಜೊತೆಗೆ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿದ್ದರು. ಅವರ ಪ್ರಭಾವದಿಂದ ರಾಜಕೀಯ ರಂಗಕ್ಕೆ ಕಾಲಿರಿಸಿದ ಮಲ್ಲಪ್ಪನವರು ಮುಂದೆ ಪ್ರಾಣೇಶಾಚಾರ್ಯ. ಜಿ ರಾಮಚಾರಿ ಅವರೊಂದಿಗೆ ನಿಕಟವರ್ತಿಗಳಾದರು, ಇವರೆಲ್ಲರೂ ಸೇರಿ ಅಂದುಹೈದ್ರಾಬಾದ ರಾಜ್ಯವನ್ನು ನಿಜಾಮನ ಕಪಿಮುಷ್ಟಿಯಿಂದ ಬಿಡುಗಡೆಗೊಳಿಸುವ ಯೋಚನೆಯಲ್ಲಿದ್ದರು. ಅಂದಿನ ನಿಜಾಮ ಆಡಳಿತ ವ್ಯವಸ್ಥೆ ಜನರಲ್ಲಿ ನಿಜಾಮನ ಬಗ್ಗೆ ಕೆಟ್ಟ ಭಾವನೆಗಳು ಚಿಗುರೊಡೆಯಲು ಪೂರಕವಾಗಿದ್ದವು.

ಅಂದು ಈ ಭಾಗದಲ್ಲಿ ನಾಯಕರೆಂದು ಗುರುತಿಸಿಕೊಂಡ ಜನಾರ್ದನರಾವ್ ದೇಸಾಯಿ, ಕೊಲೂರು ಮಲ್ಲಪ್ಪ, ಪ್ರಾಣೇಶಚಾರ್ಯ, ರಾಮಾಚಾರ್ಯ– ಈ ನಾಲ್ವರು ಗಾಂಧೀಜಿಯವರನ್ನು ಭೇಟಿಯಾಗುವ ಬಗ್ಗೆ ನಿರ್ಧರಿಸಿ ಅವರನ್ನು ಕಾಣಲು ಸಾಬರಮತಿ ಆಶ್ರಮಕ್ಕೆ ಹೋಗುವ ಕಾರ್ಯಕ್ರಮ ಹಾಕಿಕೊಂಡರು. ಇವರೆಲ್ಲರೂ 1934ರಲ್ಲಿ ಗಾಂಧೀಜಿಯವರನ್ನು ಭೇಟಿಯಾಗಿ ಆಶೀರ್ವಾದ ಪಡೆದು ಅವರ ತತ್ವಗಳ ಕಾರ್ಯಾಚರಣೆಗೆ ಕಂಕಣ ಬದ್ಧರಾದರು.

ಗಾಂಧೀಜಿಯವರ ದರ್ಶನ ಮಲ್ಲಪ್ಪನವರ ಮನಸ್ಥಿನ ಮೇಲೆ ಗಾಢವಾದ ಪ್ರಭಾವ ಬೀರಿತ್ತು. ಹೀಗಾಗಿ ಅವರು ಸ್ವಾತಂತ್ರ್ಯ ನಂತರ ತಮ್ಮ ರಾಜಕೀಯ ಬದುಕಿನುದ್ದಕ್ಕೂ ಅವರ ತತ್ವಗಳನ್ನು ಚಾಚು ತಪ್ಪದೆ ಪಾಲಿಸಿ ಹೈದ್ರಾಬಾದ್ ಕರ್ನಾಟಕದ ಗಾಂಧೀಯೆಂದು ಗುರಿತಿಸಿಕೊಂಡಿದ್ದಾರೆ.

# ಹೈದ್ರಾಬಾದ್ ವಿಮೋಚನೆಗಾಗಿ ಹೋರಾಟ

ಹೈದ್ರಾಬಾದ ವಿಮೋಚನಾ ಚಳುವಳಿ ಆರಂಭಗೊಂಡಾಗ ಮಲ್ಲಪ್ಪನವರ ವಯಸ್ಸು 30 ಇದ್ದಿರಬಹುದು. ಅಂದು ನಿಜಾಮ ಸರಕಾರದ ವಿರುದ್ಧ ಆರ್ಯ ಸಮಾಜ ಹೋರಾಟ ನಡೆಸಿತ್ತು. ಇದು ಮಲ್ಲಪ್ಪನವರಿಗೆ ಸ್ಫೂರ್ತಿ ನೀಡಿತು. ಮಲ್ಲಪ್ಪನವರ ಅಭಿಪ್ರಾಯದಲ್ಲಿ ನಿಜಾಮ ಅಷ್ಟೇನು ಕೆಟ್ಟವನಾಗಿರಲಿಲ್ಲ. ಆತನ ಹಿಂದಿನ ಅಧಿಕಾರಿ ವರ್ಗದ ದಬ್ಬಾಳಿಕೆ ಮಲ್ಲಪ್ಪನವರನ್ನು ಹೋರಾಟಕ್ಕೆ ಇಳಿಯಲು ಕಾರಣವಾಯಿತು. ಸರ್ವರೂ ಸ್ವತಂತ್ರವಾಗಿರಲು ಹೈದ್ರಾಬಾದ ಸಂಸ್ಥಾನವನ್ನು ಪ್ರಜಾಪ್ರಭುತ್ವಕ್ಕೆ ಒಳಪಡಿಸುವುದೇ ಅವರ ಚಳುವಳಿಯ ಪ್ರಮುಖ ಉದ್ದೇಶವಾಗಿತ್ತು.

ಅಂದು ನಿಜಾಮ ಅಧಿಕಾರಿ ವರ್ಗ ಮುಸ್ಲಿಂ ಜಾತಿ, ಸಂಸ್ಥೆಗಳಿಗೆ ಪ್ರೋತ್ಸಾಹ ನೀಡಿತು. ಆದರೆ ಹಿಂದೂ ಮುಸ್ಲಿಂ ಸೋದರರಂತೆ ಬದುಕುತ್ತಿದ್ದ ಸಮಯದಲ್ಲಿ ಈ ಸಂಸ್ಥೆ ಹಿಂದೂಗಳ ಮೇಲೆ ದೌರ್ಜನ್ಯಮಾಡಲು ಪ್ರೋತ್ಸಾಹ ನೀಡತೊಡಗಿತ್ತು. ಇದು ಅವರಿಗೆ ವಿಷಾದನೀಯವೆನಿಸಿತು. ಸರ್ವರಿಗೂ ಸ್ವಾತಂತ್ರ್ಯ ಇರಬೇಕು ಎಂಬುವುದು ಅವರ ತತ್ವವಾಗಿತ್ತು. ಹೀಗಾಗಿ ಅವರು ಹೋರಾಟಕ್ಕೆ ಪಾದಾರ್ಪಣೆ ಮಾಡುವುದು ಅನಿವಾರ್ಯಕ್ರಮವೆನಿಸಿತ್ತು. ಅಂದು ಇಂಥ ಪರಿಸ್ಥಿತಿಯನ್ನು ಕಂಡ ಅಪಾರ ಜನರು ಮಲ್ಲಪ್ಪನವರು ಆಂದೋಲನಕ್ಕೆ ಧುಮುಕಲು ಪ್ರಚೋದನೆ ನೀಡಿದರು.

ಹೀಗಾಗಿ ಅವರಿಗೆ ಮತ್ತಷ್ಟು ಸ್ಫೂರ್ತಿ ದೊರೆಯಿತು. ಅಂದು ಅವರು ನಿಜಾಮ ಸರಕಾರದ ವಿರುದ್ಧ ವಿದೇಶಿಬಟ್ಟೆ ಬಹಿಷ್ಕಾರ, ಧ್ವಜವಂದನೆ ಮುಂತಾದ ಕಾರ್ಯಗಳನ್ನು ಮಾಡತೊಡಗಿದರು. ಪ್ರತಿಯೊಬ್ಬ ಪ್ರಜೆಗೂ ಧಾರ್ಮಿಕ ಸ್ವಾತಂತ್ರ್ಯ ವಿಚಾರ ಪ್ರಕಟಣಾ ಸ್ವಾತಂತ್ರ್ಯ ಇರಬೇಕು ಎಂಬುವುದು ಅವರ ನಿಲುವಾಗಿತ್ತು. ಸ್ಟೇಟ್ ಕಾಂಗ್ರೆಸನ್ನು ಸ್ಥಾಪಿಸಲು ಪ್ರಮುಖ ಮುಖಂಡರು ಹೈದ್ರಬಾದಿನಲ್ಲಿ ಸಭೆ ಸೇರಿದ್ದರು. ಮಲ್ಲಪ್ಪನವರು ಕಾರ್ಯಕರ್ತರಾಗಿ ಆ ಸಭೆಗೆ ಹೋಗಿದ್ದರು. ಸಭೆಯಲ್ಲಿ ಪಾಲ್ಗೊಂಡ ಎಲ್ಲ ಕಾರ್ಯಕರ್ತರು ಒಂದು ತೀರ್ಮಾನಕ್ಕೆ ಬಂದು ಶ್ರೀ ಗೋವಿಂದರಾವ ನಾನಲ್‌ರನ್ನು ಅಧ್ಯಕ್ಷರನ್ನಾಗಿ ಮಾಡಿ ರಾಮಕೃಷ್ಣ ಧೂತರನ್ನು ಕಾರ್ಯದರ್ಶಿಯಾಗಿ ನೇಮಿಸಿದರು. ಕಾರ್ಯಸಮಿತಿಯ ಸದಸ್ಯರುಗಳಾಗಿ ಕರ್ನಾಟಕದಿಂದ ಜನಾರ್ದನರಾವ್ ದೇಸಾಯಿ, ತೆಲಂಗಾಣದಿಂದ ರವಿನಾರಾಯಣ ರೆಡ್ಡಿ, ಮರಾಠವಾಡದಿಂದ ಶ್ರೀನಿವಾಸರಾವ್ ಬೋರಿಕರ್ ನೇಮಕಗೊಂಡರು.

ಕಾಂಗ್ರೆಸ್ ಸ್ಥಾಪನೆಯಾಗಿದ್ದು ನಿಜಾಮ್ ಸರಕಾರಕ್ಕೆ ಸಹಿಸಲಾಗದೆ ಎಲ್ಲಾ ಭಾಗದಿಂದ ಬಂದಿದ್ದ ನಾಲ್ಕೂನೂರು ಜನರನ್ನು ಮತ್ತು ನೇಮಕಗೊಂಡ ನಾಯಕರನ್ನು ಬಂಧಿಸಿ ಅನಂತರ ಬಿಡುಗಡೆ ಮಾಡಲಾಯಿತು. ಕಾಂಗ್ರೆಸ್ ನಾಯಕರು ಮತ್ತು ಕಾರ್ಯಕರ್ತರಾದ ಮಲ್ಲಪ್ಪನವರು 1939ರಲ್ಲಿ ಮತ್ತೆ ಸಭೆ ಸೇರಿ ಡಿ.ಜಿ, ಬಿಂದು ಅವರನ್ನು ಅಧ್ಯಕ್ಷರನ್ನಾಗಿ ಮಾಡಿದರು. ಕಾಶೀನಾಥ್‌ರಾವ್ ವೈದ್ಯ ಪ್ರಮುಖ ಕಾರ್ಯಕರ್ತರಾಗಿ ಅಂದು ಭಾಗವಹಿಸಿದ್ದರು. ಆದರೆ ನಿಜಾಮ ಸರಕಾರ ಕಾಂಗ್ರೆಸ್ ಮೇಲೆ ಮತ್ತೆ ನಿರ್ಬಂಧನೆಯನ್ನು ಹೇರಿತು.

ಹೈದ್ರಾಬಾದ ವಿಮೋಚನಾ ಚಳುವಳಿಯಲ್ಲಿ ಪ್ರಮುಖ ನಾಯಕರಾಗಿ ಗುರುತಿಸಿಕೊಂಡು ಮಿಂಚುತ್ತಿರುವ ಅವರ ವ್ಯಕ್ತಿತ್ವ ರಜಾಕಾರರ ಕಣ್ಣು ಕುಕ್ಕಿಸಿತು. ಅವರನ್ನು ಹೇಗಾದರೂ ಮಾಡಿ ಬಂಧಿಸಬೇಕು. ಈತನ ಹಿಂದೆ ಅಪಾರ ಜನಜಂಗುಳಿ ಇದೆ. ಅವರನ್ನು ಬಂಧಿಸುವುದು ರಜಾಕಾರರ ಪರಮ ಗುರಿಯಾಗಿದ್ದಿತು. ಅಲ್ಲದೆ ಹಳ್ಳಿಯ ಮುಗ್ಧ ಮುಸ್ಲಿಂ ಜನಾಂಗವನ್ನು ಎತ್ತಿಕಟ್ಟಲು ಪ್ರಯತ್ನಿಸ ತೊಡಗಿದ್ದರು. ಇವರ ಬೆಂಬಲ ಪಡೆದು ಕೆಲವು ಅಧಿಕಾರಿಗಳು ಅವರ ಮತ್ತು ಅವರ ಕುಟುಂಬದ ಸದಸ್ಯರನ್ನು ಹಿಂಸಿಸುವ ಉದ್ದೇಶ ಹೊಂದಿದ್ದು 1940ರಲ್ಲಿ ಮಲ್ಲಪ್ಪನವರನ್ನು ಸುಳ್ಳು ಆಪಾದನೆಯ ಮೇರೆಗೆ ಸರಕಾರಿ ನೌಕರರನ್ನು ಹೆದರಿಸುತ್ತಾನೆ ಎಂಬ ಕಾರಣ ನೀಡಿ ಯಾದಗಿರಿಯಲ್ಲಿ ಬಂಧಿಸಲಾಯಿತು.

ಅವರ ಜೊತೆಯಲ್ಲಿ ಅವರ ತಂದೆ ಲಿಂಗಪ್ಪ ಹಾಗೂ ಚಿಕ್ಕಪ್ಪನ ಮಗ ಹಾಗೂ ಅತ್ತೆಯ ಮಗನನ್ನು ಬಂಧಿಸಿ ಯಾದಗಿರಿಯಿಂದ ಗುಲ್ಬರ್ಗಾ ಜೇಲಿಗೆ ವರ್ಗಾಯಿಸಿದರು. ಮಲ್ಲಪ್ಪನವರಿಗೆ ತಮ್ಮ ತಂದೆಯವರನ್ನು ಹಿಡಿದು ಹಾಕಿದ್ದು ಅತೀವ ದುಃಖ ತಂದಿತು. ಏಕೆಂದರೆ ಹೋರಾಟ ಮಾಡುತ್ತಿರುವವರು ತಾವು, ಯಾವುದೇ ಕಾರ್ಯದಲ್ಲಿ ತೊಡಗಿರದ ತನ್ನ ಮುಗ್ಧ ತಂದೆಯನ್ನು ಬಂಧಿಸಿದ್ದು ಬೇಸರವನ್ನುಂಟು ಮಾಡಿತು.

ಇತ್ತ ಕಡೆ ಅವರ ಬಂಧನಗೊಳಿಸಿದ ನಂತರ ರಜಾಕಾರರು ಅವರ ತಾತನವರನ್ನು ಬೆದರಿಸಿ, ಅವರ ಹತ್ತು ಕುರಿಗಳನ್ನು ಜಬರದಸ್ತಿಯಿಂದ ಅಪಹರಿಸಿಕೊಂಡು ತಿಂದು ತೇಗಿದರು. ಮುಗ್ಧ ಮನಸ್ಸಿನ ಅವರ ತಾತನವರು ಮಗನನ್ನು ಮತ್ತು ಮೊಮ್ಮಕ್ಕಳನ್ನು ಬಿಟ್ಟರೆ ಸಾಕು ಎಂಬ ಚಿಂತೆಯಲ್ಲಿ ಮುಳುಗಿದ್ದರು. ಅವರಿಗೆ 10 ಕುರಿಗಳು ಹೋಗಿದ್ದು ಯಾವ ಹಾನಿ ಅನ್ನಿಸಲಿಲ್ಲ. ಸುಮಾರು ಒಂದೂವರೆ ವರ್ಷ ಜೇಲು ಅನುಭವಿಸಿದ ನಂತರ ಬಿಡುಗಡೆಯಾಗಿ ಬಂದ ಮಲ್ಲಪ್ಪನವರಿಗೆ ತಿಳಿದಿದ್ದು ತಮ್ಮ ಹತ್ತು ಕುರಿಗಳನ್ನು ಅಪಹರಿಸಿದ್ದು. ಸಿಟ್ಟು ಶಾಂತಿ ರೇಖೆಯನ್ನು ದಾಟಿ ಹೋಗುತ್ತಿದ್ದರೂ ಅವರು ಸಮಾಧಾನ ತಂದುಕೊಂಡು ಇದನ್ನು ಪ್ರತಿಭಟಿಸಲು, ಇದಕ್ಕಾದ ಅನ್ಯಾಯಕ್ಕೆ ನ್ಯಾಯ ಪರಿಹಾರ ಪಡೆಯಲು ದೃಢ ನಿರ್ಧಾರವನ್ನು ಮಾಡಿದರು.

ಅವರು ಯಾದಗಿರಿಯ ಮುನ್ಸಿಫನ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳಲು ಹೈದ್ರಾಬಾದ್ ಚೀಫ್ ಜಡ್ಜರಿಗೆ ವಿವರಣಾತ್ಮಕ ವಿಷಯವನ್ನು ಒಳಗೊಂಡ ಮನವಿಯನ್ನು ಸಲ್ಲಿಸಿದರು. ಕೆಲವು ದಿನಗಳ ನಂತರ ಅವರಿಗೆ ಹೈದ್ರಾಬಾದ್ ಚೀಫ್ ಜಡ್ಜರಿಂದ ಕರೆಯೋಲೆ ಬಂತು. ಅವರು ಹೈದ್ರಾಬಾದ್‌ಗೆ ಹೋದರು. ಚೀಫ್ ಜಡ್ಜರ ಮುಂದೆ ನಡೆದ ವಿಷಯವನ್ನು ವಿವರಿಸಿ ಸೂಕ್ತ ಕ್ರಮಕ್ಕೆ ವಿನಂತಿಸಿಕೊಂಡರು.

ಅಂದು ನಿಷ್ಪಕ್ಷ ಪಾತನಾಗಿದ್ದ ನ್ಯಾಯಧೀಶ ಇದಕ್ಕೆ ಸಂಬಂಧಪಟ್ಟಂತೆ ನೀನು ಹೆಚ್ಚಿಗೆ ಹೇಳುವ ಅವಶ್ಯಕತೆಯಿಲ್ಲ. ನಾನು ಇದರ ವಿರುದ್ಧ ಸೂಕ್ತ ಕ್ರಮವನ್ನು ತೆಗೆದುಕೊಳ್ಳುತ್ತೇವೆ ಎಂದು ಹೇಳಿದರಲ್ಲದೆ ಕೋರ್ಟಿನ ಹಾಲಿನಲ್ಲಿ ಕುಳಿತಿದ್ದ ವಕೀಲರತ್ತ ಚೀಫ್ ಜಡರು ನೋಡುತ್ತಾ ಹೀಗೆ ಹೇಳಿದರು. "ಈ ಕೊಲೂರು ಮಲ್ಲಪ್ಪನವರನ್ನು ನೋಡಿ, ಎಷ್ಟು ಇವರ ಹತ್ತಿರ ಧೈರ್ಯವಿದೆ. ಒಬ್ಬ ಮುನ್ಸೂಫನ

ವಿರುದ್ಧ ಕಂಪಲೇಂಟ್ ಮಾಡಿದ್ದಾರೆ." ಎಂದು ವಕೀಲರ ಸಮೂಹದ ಮುಂದೆ ಅವರನ್ನು ಪ್ರಶಂಸಿಸುತ್ತಾ ಮಾತನ್ನು ಮುಂದುವರೆಸಿ ಹೀಗೆ ಹೇಳಿದರು.

"ಇವರು ಸಾಮಾನ್ಯ ವ್ಯಕ್ತಿಯಲ್ಲ. ಮುಂದೊಂದು ದಿನ ಇತಿಹಾಸದಲ್ಲಿಯೇ ಗುರುತಿಸುವ ವ್ಯಕ್ತಿಯಾಗುತ್ತಾರೆ." ಎಂದು ನುಡಿದರು. ಕೆಲವು ದಿನಗಳಲ್ಲಿಯೇ ಯಾದಗಿರಿಯ ಮುನ್ಸಿಫನನ್ನು ಬೇರೆಕಡೆ ವರ್ಗಮಾಡಿ ಅವರನ್ನು ಡಿಸ್‌ಮಿಸ್ ಮಾಡಿಸಿದರು. ಇದು ಅವರ ಅನ್ಯಾಯದ ವಿರುದ್ಧ ಹೋರಾಟಕ್ಕೆ ಸಿಕ್ಕ ಪ್ರತಿಫಲವಾಗಿತ್ತು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಇದೇ ಸಂದರ್ಭದಲ್ಲಿ ಗಾಂಧೀಜಿಯ ನಾಯಕತ್ವದಲ್ಲಿ ಭಾರತ ಬಿಟ್ಟು ತೊಲಗಿ ಚಳುವಳಿ ಆರಂಭಗೊಂಡಿತು. ಇದರ ಬಿಸಿ ಅವರಿಗೆ ತಟ್ಟಿತು. ಈ ಸಮಯದಲ್ಲಿ ಮಲ್ಲಪ್ಪನವರು ಮತ್ತು ದಿವಂಗತ ಮಾಣಿಕರಾವ್ ವಕೀಲರು 1942ರಲ್ಲಿ ಬಾಂಬೆಯ ಅಧಿವೇಶನಕ್ಕೆ ಹೋಗಿ ಬಂದರು. ಈ ಭಾಗದಿಂದ ಹೋಗಿ ಬಂದ ಮೊದಲ ವ್ಯಕ್ತಿ ಇವರಾಗಿದ್ದರು. ಗುಲಬರ್ಗಾ ವಿಭಾದಲ್ಲಿ ಸುಳ್ಳು ಅಪಾದನೆಯ ಮೇರೆಗೆ ಈ ಚಳುವಳಿಯ ಸಮಯದಲ್ಲಿ ಅವರನ್ನು ಎರಡನೇ ಸಲ 1942ರಲ್ಲಿ ಯಾದಗಿರಿಯಲ್ಲಿ ಬಂಧಿಸಲಾಯಿತು.

ಅವರ ಬಂಧನದ ವಿಚಾರಣೆಯ ಕೇಸು ಕನಿಷ್ಠ ಒಂದೂವರೆ ವರುಷ ನಡೆಯಿತು ತನ್ನ ಸಹ ಹೋರಾಟಗಾರರಾದ ಜಗನ್ನಾಥರಾವ್ ಚಂಡ್ರಕಿ, ದತ್ತಾತ್ರೇಯರಾವ್ ಅವರಾದಿ ಹಾಗೂ ಬೀದರಿನ ಮುರುಳೀಧರರಾವ್ ಕಾಮತಿಕರ್ ಅವರ ಜೊತೆಯಲ್ಲಿ ಶಿಕ್ಷೆ ಅನುಭವಿಸಿದರು. ಅವರನ್ನು ಯಾದಗಿರಿಯ ಸಬ್ ಜೈಲ್ ಮುಖಾಂತರ ಗುಲಬರ್ಗಾ ಕೇಂದ್ರ ಕಾರಾಗೃಹಕ್ಕೆ ವರ್ಗಾಯಿಸಲಾಯಿತು. ಈ ಸಂದರ್ಭದಲ್ಲಿ ಅವರನ್ನು ಉದ್ದೇಶಪೂರ್ವಕವಾಗಿ ಕಬ್ಬಿಣದ ಬೇಡಿಕೆಗಳನ್ನು ಹಾಕಿ ಕರೆದೊಯ್ದರು. ಅವರನ್ನು  ಪ್ರತಿದಿವಸ ಪರೇಡ್ ಮುಖಾಂತರವಾಗಿ ಪೀಡಿಸುತ್ತಿದ್ದರು.

ಅವರು ಸ್ವತಂತ್ರವಾಗಿರಲು ಕಾಲಾವಕಾಶ ಮಾಡಿಕೊಟ್ಟಿರಲಿಲ್ಲ. ಆ ಸಮಯದಲ್ಲಿ ಅವರಿಗೆ ಕಾಲಿನಲ್ಲಿಗಾಯವಾಗಿತ್ತು. ರಕ್ತ ಸುರಿಯಲಾರಂಭಿಸಿತು. ಇದಾವುದನ್ನು ಸರಕಾರ ಗಮನಿಸಲಿಲ್ಲ. ಜೈಲಿನಲ್ಲಿ ಪೋಲಿಸರು ಅವರನ್ನು ದೈಹಿಕವಾಗಿ ಪೀಡಿಸುತ್ತಿದ್ದರು. ಅವರಿಗೆ 18–20 ಸೇರಿನಷ್ಟು ಜೋಳವನ್ನು ಬೀಸಲು ಹಚ್ಚುತ್ತಿದ್ದುದಲ್ಲದೇ ಜೈಲಿನಲ್ಲಿ ಕಠಿಣವಾದ ಕೆಲಸವನ್ನು ಮಾಡಲು ಹೇಳುತ್ತಿದ್ದರು.

ತಾಳ್ಮೆ ಶಕ್ತಿಯನ್ನು ಕರಗತ ಮಾಡಿಕೊಂಡಿರುವ ಅವರು ಅಪಾರ ನೋವನ್ನುಂಡು ಬಿಡುಗಡೆಯಾದರು. ಸ್ವಾರ್ಥ ಬುದ್ಧಿಯನ್ನೇ ತಮ್ಮ ಬಂಡವಾಳವಾಗಿಟ್ಟುಕೊಂಡ ರಜಾಕಾರರು ಮಲ್ಲಪ್ಪನವರು ಮನೆಯಲ್ಲಿಲ್ಲದ ಸಮಯ ನೋಡಿ ಅವರ ಮನೆ ಹೊಕ್ಕು ಅವರ ತಾಯಿ ಭೀಮವ್ವ ಎಂಬುವವರನ್ನು ಅಂಜಿಸಿ ಮನೆಯಲ್ಲಿದ್ದ ಎಲ್ಲ ಕಾಗದ ಪತ್ರಗಳನ್ನು ಸುಟ್ಟು ಹಾಕಿದರಲ್ಲದೇ ಇವರು ಮಲ್ಲಪ್ಪನವರ ಮನೆಯನ್ನು ತಮ್ಮ ಕೇಂದ್ರ ಕಛೇರಿಯನ್ನಾಗಿ ಮಾಡಿಕೊಂಡು ತಮ್ಮ ದುಷ್ಟ ಕಾರ್ಯದಲ್ಲಿ ತೊಡಗಿದರು. ಅವರ ತಾಯಿ ಭೀಮವ್ವಳಿಗೆ ಒಂದು ರೂಂ ಬಿಟ್ಟು ಎರಡು ಅಂತಸ್ತಿನ ಮನೆಯನ್ನು ತಾವೇ ಅಕ್ರಮಿಸಿ ತಮ್ಮ ಚಟುವಟಿಕೆಗಳನ್ನು ಮುಂದುವರೆಸಿದರು. ಅದರೆ ಗಟ್ಟಿ ಧೈರ್ಯದ ಅವರ

ತಾಯಿ ಯಾವುದೇ ಬೆದರಿಕೆಗೆ ಹೆದರುತ್ತಿರಲಿಲ್ಲ. ಅಂದು ರಜಾಕಾರರ ಘೋಷಣೆ ಈ ರೀತಿಯಾಗಿತ್ತು. "ಬ್ರಾಹ್ಮಣರನ್ನು ಹೊಡೆಯಿರಿ. ಕೊಮಟರನ್ನು ಸುಲಿಯಿರಿ". ಎನ್ನುವುದಾಗಿತ್ತು.

ಇವರ ಕಾರ್ಯ ಚಟುವಟಿಕೆಗಳು ಹೆಚ್ಚಾಗುವುದನ್ನು ಗಮನಿಸದ ಮಲ್ಲಪ್ಪನವರು ಜಿ. ರಾಮಾಚಾರ್ಯರ ಜೊತೆಗೂಡಿಕೊಂಡು ಗಾಂಧಿಜಿಯವರ ದರ್ಶನಕ್ಕೆ 1945 ರಲ್ಲಿ ಬಾಂಬೆ ಅಧಿವೇಶನಕ್ಕೆ ಹೋದರು. ಅವರು ಗಾಂಧೀಜಿಯವರನ್ನು " ಬಾಪೂಜೀ ರಾಜಾಕಾರರು ನಮಗೆ ಬಹಳಷ್ಟು ತ್ರಾಸ್ ಕೊಡುತ್ತಿದ್ದಾರೆ. ಅದಕ್ಕೆ ನಮ್ಮ ರಕ್ಷಣೆಗಾಗಿ ನಾವು ಬಾಂಬ್‌ಗಳನ್ನು ಹೊಂದಬೇಕೆಂದು ನಿರ್ಧರಿಸಿದ್ದೇವೆ. ಎಂದು ಇಬ್ಬರೂ ಕೈಜೋಡಿಸಿ ಗಾಂಧೀಜಿಯವರನ್ನು ಕೇಳಿಕೊಂಡರು. ಆ ಮಾತಿಗೆ ಗಾಂಧಿಜಿಯವರು ಹೀಗೆ ಹೇಳಿದರು. "ನೋಡರೀ ನಾನು ಮಾತ್ರ ಗೋಲಿ ವಿರುದ್ಧ ಇದ್ದೇನೆ. ಅದು ನಿಮಗೆ ಬಿಟ್ಟ ವಿಷಯ. ಇದರ ಬಗ್ಗೆ ನನ್ನನ್ನು ಕೇಳಬೇಡಿ, ಹೊಂದಬಹುದು ಬಿಡಬಹುದು ನಾನು ಮಾತ್ರ ಅದನ್ನು ವಿರೋಧಿಸುತ್ತೇನೆ" ಎಂದು ಹೇಳಿದರು.

ಆಗ ಮಲ್ಲಪ್ಪನವರು ಮತ್ತು ರಾಮಾಚಾರ್ಯರು ಗಾಂಧೀಜಿಯವರಿಂದ ಆಶೀರ್ವಾದ ಪಡೆದು ತಮ್ಮ ನೆಲೆಗಳಿಗೆ ವಾಪಸಾದರು. ಅಧಿವೇಶನದಿಂದ ಬಂದ ಅವರಿಗೆ ಕಾರ್ಯಕರ್ತರು ಹೋರಾಟದ ಬಣವನ್ನು ಸಿದ್ಧಗೊಳಿಸಲು ಒತ್ತಾಯ ಪಡಿಸತೊಡಗಿದರು. ಗುಲಬರ್ಗಾ ವಿಭಾಗದಲ್ಲಿ ಮಲ್ಲಪ್ಪ ಮತ್ತು ಚಂದ್ರಕಿಯುವರ ನಾಯಕತ್ವದಲ್ಲಿ ಹೋರಾಟ ಕಾರ್ಯ ನಡೆಯಿತು. ಈ ಭಾಗದಲ್ಲೆಲ್ಲ ವಿಶೇಷ ಜಾಗ್ರತೆ ಮೂಡಿತು. ರಾಜಾಕಾರರ ಕಾರ್ಯ ಚಟುವಳಿಕೆಗಳಿಂದ ಸಿಡಿಮಿಡಿಗೊಂಡಿದ್ದ ದತ್ತಾತ್ರೇಯ ಅವರಾದಿಯವರು ಗುಲ್ಬರ್ಗಾ ವಿಭಾಗದಲ್ಲಿ ಹೋರಾಟದ ಮುಂಚೂಣೆಯಲ್ಲಿದ್ದ ಮಲ್ಲಪ್ಪನವರ ಪ್ರಭಾವಕ್ಕೊಳಗಾಗಿ ತನ್ಮೂಲಕ ಶ್ರದ್ಧೆಯಿಂದ ಹೋರಾಟಕ್ಕಿಳಿಯಲು ಪ್ರೇರಣೆ ದೊರಕಿತು. ಡೆಪ್ಯೂಟಿ ಕಮಿಷನರ್ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದ ಅವರಾದಿ ಅದನ್ನು ಬಿಟ್ಟು ಮಲ್ಲಪ್ಪನವರ ಜೊತೆಯಾಗಿ ಭೂಗತ ಚಟುವಟಿಕೆಗಳಲ್ಲಿ ತೊಡಗಿದರು.

ರಾಜಕೀಯ ಚಟುವಟಿಕೆಗಳ ನಾಯಕತ್ವವನ್ನು ವಹಿಸಿದವರಲ್ಲಿ ರಾಯಚೂರಿನ ಜನಾರ್ದನ ರಾವ್ ದೇಸಾಯಿ, ಜಿ. ರಾಮಾಚಾರ್ಯ ನೇತಾರರೆನಿಸಿದರೆ ಗುಲ್ಬರ್ಗಾ ಜಿಲ್ಲೆಯಲ್ಲಿ ಮಲ್ಲಪ್ಪನವರು ಅಗ್ರಗಣ್ಯ ನೇತಾರರಾಗಿದ್ದರು. ಅಂದು ಯಾದಗಿರಿಯಲ್ಲಿ ಜವಾಬ್ದಾರಿ ಸರ್ಕಾರದ ಬೇಡಿಕೆಯನ್ನು ಮುಂದಿಟ್ಟುಕೊಂಡು ಮಲ್ಲಪ್ಪನವರು ಸತ್ಯಾಗ್ರಹ ಆರಂಭಿಸಿದರು. ಅಪಾರ ಸಂಖ್ಯೆಯಲ್ಲಿ ಸೇರಿದ್ದ ಕಾರ್ಯಕರ್ತರಿಗೆ ಅವರು ಹೀಗೆ ಹೇಳಿದರು. ಜವಾಬ್ದಾರಿ ಸರಕಾರದ ರಚನೆಯಾಗುವವರೆಗೂ ನಮ್ಮ ಹೋರಾಟವನ್ನು ಮುಂದುವರಿಸೋಣ. ಈ ಕಾರ್ಯ ಸಾಧನೆಗಾಗಿ ನಾವೆಲ್ಲ ಒಟ್ಟಾಗಿ ದುಡಿಯೋಣ ಎಂದು ಸವಾಲು ಎಸೆದವರಲ್ಲಿ ಕೊಲೂರು ಮಲ್ಲಪ್ಪನವರು ಪ್ರಮುಖರು.

ಅವರ ಜೊತೆ ಭೀಮಸೇನರಾವ ಇಮಾರತ್, ಮಲ್ಲಣ್ಣ ಅಂಬಿಗಾರ, ಜಗದೇವಪ್ಪ ಹಾಲಭಾವಿ ಇತರ ಪ್ರಮುಖರು ಪಾಲ್ಗೊಂಡಿದ್ದರು. ಅವರ ಹಿಂದೆ ಅಪಾರ ಸಂಖ್ಯೆಯ ಕಾರ್ಯಕರ್ತರು ಇದ್ದು ಬೆಂಬಲ ಸೂಚಿಸಿದರು. ಅನೇಕ ಜನ ತರುಣರು ತಮ್ಮ ನೌಕರಿಯನ್ನು ಬಿಟ್ಟು ಪೂರ್ಣಾವಧಿ

ಸ್ವಾತಂತ್ರ್ಯ ಹೋರಾಟಕ್ಕೆ ಕಂಕಣ ಬದ್ಧರಾದರು. ಅವರೆಂದರೆ ದತ್ತಾತ್ರೇಯ ಅವರಾದಿ, ಬಾಪಾಸಾಬ ದೇವಳಗಾಂವಕರ, ನಾರಾಯಣ ರಾವ್ ಕಾನಿಯಾಳ್, ಎಸ್, ಹಣಮಂತರಾವ್ ಇತ್ಯಾದಿ.

ಅಂದು ಯಾದಗಿರಿಯಲ್ಲಿ ಶೇಖ ಅಬ್ದುಲ್ಲಾ ಅವರ ಬಂಧನದ ವಾರ್ತೆಕೇಳಿ ಮಲ್ಲಪ್ಪನವರ ಮನ ಕಲಕಿತು. ಯಾದಗಿರಿಯಲ್ಲಿ ಅದರ ಬಗ್ಗೆ ಪ್ರತಿಭಟನೆಯನ್ನು ಕಪಟ್ರಾಳ ಕೃಷ್ಣರಾವ ಮಾಡಿದರು. ಮಲ್ಲಪ್ಪನವರು ಉಪಸ್ಥಿತರಿದ್ದರು. ಮುಂದೆ ಅವರ ಮಾರ್ಗದರ್ಶನದಲ್ಲಿ ಬಾಪಸಾಬ ದೇವಳಗಾಂವಕರ್ ಪ್ರಾಂತೀಯ ಕಾರ್ಯದರ್ಶಿಯಾಗಿ ದತ್ತಾತ್ರೇಯ ಅವರಾದಿ ಜಿಲ್ಲಾ ಕಾರ್ಯದರ್ಶಿಯಾಗಿ, ಹಳ್ಳಿ ಹಳ್ಳಿಗೆ ಹೋಗಿ ಪ್ರಚಾರಮಾಡಿ ಮಲ್ಲಪ್ಪನವರ ಪ್ರಭಾವವನ್ನು ಬಳಸಿಕೊಂಡು ಜನ ಜಾಗ್ರತಿಯನ್ನು ಮಾಡಿದರು.

ಅಂದು ಮುಸ್ಲಿಂ ಸಂಸ್ಥೆಯು ಉಗ್ರಗಾಮಿಗಳ ಸ್ವಾಧೀನಕ್ಕೆ ಸೇರಿದ ಸಂಗತಿ ಮಲ್ಲಪ್ಪನವರಿಗೆ ತೀವ್ರ ಕಳವಳ ಉಂಟುಮಾಡಿತ್ತು. ಏಕೆಂದರೆ ಶಾಂತಿಪ್ರಿಯರಾಗಿದ್ದು ಸಹನಾಶೀಲತೆಯೇ ಮಲ್ಲಪ್ಪನವರ ಪರಮ ಗುರಿಯಾಗಿದ್ದಿತು. ಅವರ ಹೋರಾಟ ಶಾಂತಿಯಿಂದ ಕೂಡಿತ್ತು. ಕಾನೂನು ಉಲ್ಲಂಘಿಸುವುದು ಆಗಿದ್ದಿತು. ರಜಾಕಾರರು ಎಂಬ ಮುಸ್ಲಿಂ ಸ್ವಯಂ ಸೇವಕರು ತಮ್ಮ ಸಂಘಗಳನ್ನು ಜಿಲ್ಲಾ, ತಾಲ್ಲೂಕು ಮತ್ತು ಗ್ರಾಮಗಳಲ್ಲಿ ಸಂಘಟಿಸತೊಡಗಿದರು. ಇದು ಮಲ್ಲಪ್ಪನವರಿಗೆ ಸಹಿಸದ ವಿಷಯವಾಗಿ ತಲೆದೋರಿತು. ಅವರ ದೃಷ್ಟಿಕೋನದಲ್ಲಿ ಎಲ್ಲರೂ ಸಮಾನರು. ಹಿಂದೂ ಮುಸ್ಲಿಂ ಎನ್ನುವ ಬೇಧ ಭಾವ ಇಲ್ಲದೆ ಸೌಹಾರ್ದತೆಯಿಂದ ಒಂದು ಕುಟುಂಬದ ಸದಸ್ಯರಂತೆ ಬದುಕು ಸಾಗಿಸುತ್ತಿದ್ದ ಮುಸ್ಲಿಂ ಬಂಧುಗಳಲ್ಲಿ ರಜಾಕಾರರ ತಂಡದವರು ಅವರ ಮನಸ್ಸಿನಲ್ಲಿ ಜಾತೀಯ ವಿಷಬೀಜವನ್ನು ಬಿತ್ತತೊಡಗಿದರು. ಇದು ಐಕ್ಯತೆಗೆ ಕಂಟಕ ಪ್ರಾಯವೆನಿಸಿತು.

ರಜಾಕಾರರು ಸರಕಾರದ ಪ್ರತ್ಯಕ್ಷ ಅಪ್ರತ್ಯಕ್ಷ ಬೆಂಬಲದಿಂದ ಕಲಿತ ಮುಸ್ಲಿಂ ಬಂಧುಗಳಲ್ಲಿ ಮತಾಂಧತೆ, ಅಧಿಕಾರದಾಹ ಹಿಂಸಾ ಮನೋವೃತ್ತಿ ಬೆಳೆಸಲು ತೊಡಗಿದರು. ಆದರೆ ಬಹುತೇಕ ಮುಸ್ಲಿಂ ಬಂಧುಗಳು ಇಂತಹ ಸನ್ನಿವೇಶಕ್ಕೆ ಕಿವಿಗೊಡಲಿಲ್ಲವಾದರೂ ರಜಾಕಾರರು ತಮ್ಮ ಕಾರ್ಯ ಚಟುವಟಿಕೆಗಳನ್ನು ತ್ವರಿತಗತಿಯಿಂದ ಮುಂದುವರೆಸಿಕೊಂಡು ನಡೆಸಿದರು. ಇದು ಮಲ್ಲಪ್ಪನವರು ಮತ್ತು ಅವರ ಕಾರ್ಯಕರ್ತರಿಗೆ ಸಹಿಸದ ಸಂಕಷ್ಟಕ್ಕೆ ಸಿಲುಕಿದರು. ಈಗಾಗಲೇ ನೊಂದು ಬೆಂದ ಜನತೆ ತಮ್ಮ ಸಹನಾ ಶೀಲತೆ ಕಳೆದುಕೊಂಡು ತಮ್ಮ ಪ್ರಮುಖ ಮುಖಂಡರಲ್ಲಿ ಒಬ್ಬರಾದ ಮಲ್ಲಪ್ಪನವರನ್ನು ಉಗ್ರವಾದ ಹೋರಾಟಕ್ಕಿಳಿಯಲು ಒತ್ತಾಯಿಸತೊಡಗಿದರು.

ಅಂದು ಮಂದಗಾಮಿ ಹಾಗೂ ಶಾಂತಿಯ ರುವಾರಿ ಎಂದು ಕರೆಸಿಕೊಂಡಿದ್ದ ಅವರು ಒತ್ತಾಯಪಡಿಸುತ್ತಿದ್ದ ಜನ ಸಮುದಾಯಕ್ಕೆ ಹೀಗೆ ಕರೆ ನೀಡಿದರು. ಬಂಧುಗಳೇ ವಿಮೋಚನೆ ನಮ್ಮ ಗುರಿಯಾಗಲಿ ಹಿಂಸೆ ಮಾರ್ಗವನ್ನು ಅನುಸರಿಸುವುದು ಬೇಡ. ಬ್ರಿಟಿಷರನ್ನು ಹೊಡೆದು ಓಡಿಸಲು ಗಾಂಧೀಜಿಯವರು ಅಹಿಂಸಾ ಮಾರ್ಗದಿಂದ ಹೋರಾಟ ಮಾಡುತ್ತಿಲ್ಲವೆ? ಶಾಂತಿ ಸಹನೆಯಿಂದ ಅವರ ತತ್ವಗಳನ್ನು ಹಾಗೂ ಆದರ್ಶಗಳನ್ನು ನಾವು ಅನುಸರಿಸೋಣ. ನಮ್ಮ ಹೋರಾಟ ಯಾವತ್ತೂ ಹಿಂಸಾರೂಪಕ್ಕೆ ಇಳಿಯಬಾರದು.

ಎಂಥ ಕಷ್ಟ ಬಂದರೂ ಅದನ್ನು ಅಷ್ಟೇ ಸಹನಾಶೀಲತೆಯಿಂದ ಎದುರಿಸಬೇಕು. ಆದರೆ ಹೋರಾಟದಲ್ಲಿ ಅಪಾರ ನೋವುಗಳುಂಟು. ಆ ನೋವುಗಳ ನಿವಾರಣೆಗಾಗಿ ಅಲ್ಲವೇ ನಾವು ಇಂದು ಹೋರಾಟ ಮಾಡುತ್ತಿರುವುದು ಎಂದು ಸೇರಿದ್ದ ಜನ ಸಮುದಾಯಕ್ಕೆ ಕರೆ ನೀಡುತ್ತಾ, ನಮ್ಮ ಶ್ರಮಕ್ಕೆ ಪ್ರತಿಫಲ ಇದ್ದೆ ಇರುತ್ತದೆ. ಅದು ವಿಳಂಭವಾಗಬಹುದು. ಸಹ ಹೋರಾಟಗಾರರೇ ಸಹನಾಶೀಲತೆಯನ್ನು ಕಳೆದುಕೊಳ್ಳಬೇಡಿರಿ. "ತಾಳಿದವನು ಬಾಳುತ್ತಾನೆ. ಎಂಬ ನಾಣ್ಣುಡಿಯಂತೆ ನಮ್ಮ ಶಾಂತಿಯುತ ಹೋರಾಟಕ್ಕೆ ಪ್ರತಿಫಲ ಸಿಕ್ಕೆ ಸಿಗುತ್ತದೆ ಎಂಬುದಂತೂ ದಿಟ ಎಂದು ಕರೆ ನೀಡಿದರು.

ಅಂದಿನ ಸಂದರ್ಭದಲ್ಲಿ ಮಲ್ಲಪ್ಪನವರು ಹಾಕುತ್ತಿದ್ದ ಗಾಂಧಿ ಟೋಪಿಯನ್ನು ರಜಾಕಾರರು ಸಹಿಸುತ್ತಿರಲಿಲ್ಲ. ಅವರಿಂದ ಪ್ರೇರಿತರಾದ ಕೆಲವರು ಟೋಪಿಯನ್ನು ಕಿತ್ತೆಗೆಯಲು ಪ್ರಯತ್ನಿಸುತ್ತಿದ್ದರು. ಖಾದಿಧಾರಿಯಾಗಿದ್ದ ಅವರಿಗೆ ಸಹನಶೀಲತೆ ಕಳೆದುಕೊಳ್ಳಬೇಕೆನಿಸುತ್ತಿತ್ತು. ಆದರೆ ಗಾಂಧೀಜಿಯವರ ತತ್ವಗಳು ಅವರ ಹೃದಯ ಕಮಲದಲ್ಲಿ ಬೇರು ಬಿಟ್ಟಿದ್ದವು.

ರಜಾಕಾರರ ವಿರುದ್ಧ ಪ್ರತಿಭಟಿಸಲು ಪೂರ್ವಭಾವಿ ಹೋರಾಟದ ರೂಪರೇಷೆಗಳನ್ನು ಸಿದ್ಧಪಡಿಸತೊಡಗಿದರು. ಅವರು ನಿಷ್ಪಕ್ಷಪಾತ, ನ್ಯಾಯ ನಿಷ್ಠುರತೆ, ಭ್ರಾತೃತ್ವ ಮನೋಭಾವನೆಗಳಿಂದ ಅಪಾರ ಜನಸ್ತೋಮದಿಂದ ತಮ್ಮ ವ್ಯಕ್ತಿತ್ವವನ್ನು ಗುರುತಿಸಿಕೊಂಡಿದ್ದರು. ಅವರನ್ನು ಭೇಟಿ ಮಾಡಿದ್ದ ಅಪಾರ ಸಂಖ್ಯೆಯ ಕಾರ್ಯಕರ್ತರು ಸರಕಾರದ ವಿರುದ್ಧ ಹೋರಾಟದ ಚೌಕಟ್ಟನ್ನು ರೂಪಿಸಿಕೊಳ್ಳಲು ಒತ್ತಾಯಿಸತೊಡಗಿದರು.

ಗಾಂಧೀಜಿಯ ತತ್ವಗಳಿಗೆ ಮಾರುಹೋಗಿದ್ದ ಅವರು ಹೋರಾಟವನ್ನು ಶಾಂತರೀತಿಯಿಂದ ರೂಪಿಸಿಕೊಳ್ಳೋಣ ಎಂದು ಜನತೆಗೆ ಕರೆನೀಡಿದರು. ಯಾವುದೇ ಹಿಂಸೆಗೆ ಇಳಿಯಬಾರದು. ನಾವು ಕಾನೂನು ಭಂಗ ಮಾಡುವುದು, ಕಾನೂನು ವಿರೋಧಿಸುವುದು ಶಾಂತ ರೀತಿಯಿಂದ ಕೂಡಿದ್ದಾಗಿರಬೇಕೇ ವಿನಹ ಯಾವುದೇ ಅಹಿತಕರ ಘಟನೆಗಳಿಗೆ ಅವಕಾಶ ಮಾಡಿಕೊಡುವುದು ಹೋರಾಟದ ಉದ್ದೇಶವಾಗಿರಬಾರದು ಎಂಬುದು ಅವರ ಅಂತರಾಳದ ತತ್ವವಾಗಿದ್ದಿತು. ತನ್ನಲ್ಲಿ ಬಂದು ಸೇರುತ್ತಿದ್ದ ಅಪಾರ ಜನಸ್ತೋಮಕ್ಕೆ ಅವರು ಇದೇ ಮನವಿಯನ್ನು ಮಾಡುತ್ತಿದ್ದರು.

ಮಲ್ಲಪ್ಪನವರ ಮುಖಂಡತ್ವದಲ್ಲಿ ಯಾದಗಿರಿಯಲ್ಲಿ 1946 ರಲ್ಲಿ ಮತ್ತೆ ಸತ್ಯಾಗ್ರಹವನ್ನು ಆರಂಭಿಸಲಾಯಿತು. ಇದರಲ್ಲಿ ಗಣನೀಯ ಸಂಖ್ಯೆ ಕಾರ್ಯಕರ್ತರು ಭಾಗವಹಿಸಿದ್ದರು. ಇವರಿಗೆ ಮಲ್ಲಪ್ಪನವರೇ ಸ್ಫೂರ್ತಿಯ ಸೆಲೆಯಾಗಿದ್ದರು.

"ನಿಜಾಮರೇ ಸರ್ವರಿಗೂ ಸ್ವಾತಂತ್ರ್ಯ ಕೊಡಿ" ಎಂದು ಘೋಷಿಸುತ್ತಾ ಚಳುವಳಿಯನ್ನು ಆರಂಭಿಸಿದರು. ನಿಜಾಮ ಸರಕಾರ ಇದನ್ನು ತಡೆಯಲು ಪ್ರಯತ್ನಿಸಿತಾದರೂ ಅವರ ಯಾವುದೇ ದಬ್ಬಾಳಿಕೆಗೆ ಮಣಿಯಲಿಲ್ಲ. ಇತರ ಪ್ರಮುಖ ಕಾರ್ಯಕರ್ತರಾಗಿ ಕೆಲಸ ಮಾಡಿದವರೆಂದರೆ ಮಲ್ಲಣ್ಣ ಅಂಬಿಗಾರ, ಜಗದೇವಪ್ಪ ಮತ್ತು ಭೀಮಸೇನರಾವ್ ಹಿಮಾರಡ್. ಅಂದು ಯಾದಗಿರಿಯಲ್ಲಿ ಗಾಂಧಿ ಜಯಂತಿಯನ್ನು ಮಲ್ಲಪ್ಪನವರು ಮತ್ತು ಚಂದ್ರಿಕೆಯವರ ಮುಖಂಡತ್ವದಲ್ಲಿ ಆಚರಿಸಲಾಯಿತು.

ನಿಜಾಮ ಪೋಲಿಸರು ಇದನ್ನು ತಡೆಯಲು ಪ್ರಯತ್ನಿಸಿದರು. ಆದರೆ ಅದಕ್ಕೆ ಅಸ್ಪದ ಮಾಡಿಕೊಡಲಿಲ್ಲ. ಈ ಅಂಶ ಕಾರ್ಯಕರ್ತರಲ್ಲಿ ಮತ್ತಷ್ಟು ಸ್ಫೂರ್ತಿ ನೀಡಿದಂತಾಯಿತು. ಅಂದು ಜನರು ಕಾಂಗ್ರೆಸ್ ಸದಸ್ಯರಾಗಲು ಅಂಜುತ್ತಿದ್ದರು ಮಲ್ಲಪ್ಪನವರ ನಾಯಕತ್ವದಲ್ಲಿ ಅವರ ಸಹನಶೀಲತೆ, ಅವರ ಉದಾರಭಾವನೆ ಜನರನ್ನು ಚಳುವಳಿಗೆ ಆಕರ್ಷಿಸಿತು.

ದಿನ ಕಳೆದಂತೆಲ್ಲ ಅವರ ವ್ಯಕ್ತಿತ್ವ ಬೆಳೆಯುತ್ತಾ ನಡೆಯಿತು. ಅಪಾರ ಸಂಖ್ಯೆಯಲ್ಲಿ ಕಾರ್ಯಕರ್ತರು ಅವರ ಮಾರ್ಗದರ್ಶನದಲ್ಲಿ ಕಾಂಗ್ರೆಸ್ ಸದಸ್ಯರಾದರು. ಮಲ್ಲಪ್ಪನವರು ನೆಹರು ಅವರ ವ್ಯಕ್ತಿತ್ವವನ್ನು ಅರಿತುಕೊಂಡಿದ್ದರಿಂದ ಕಾಂಗ್ರೆಸ್ ಪಕ್ಷವನ್ನು ಬಲಪಡಿಸುವುದು ಅವರ ಗುರಿಯಾಗಿದ್ದಿತು. ಆ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾದರು. ಆದರೆ ನಿಜಾಮ ಸರಕಾರದ ಭಯದಿಂದ ಜನತೆ ಕಾಂಗ್ರೆಸ್ ಸದಸ್ಯರಾಗಲು ಹೆದರುತ್ತಿದ್ದರು. ಅವರು ಕಾರ್ಯಕರ್ತರಲ್ಲಿ ಧೈರ್ಯವನ್ನು ತುಂಬಿ ಜನರು ಸ್ವಇಚ್ಛೆಯಿಂದ ಕಾಂಗ್ರೆಸ್ ಸದಸ್ಯರಾಗುವಂತೆ ಮಾಡಿದರು.

ಆಗ ಯಾದಗಿರಿಯಲ್ಲಿ ಅವರು ಕಾಂಗ್ರೆಸ್ ಪ್ರಮುಖ ನಾಯಕರಾಗಿದ್ದರು. ಅವರು ಮತ್ತೆ 1946ರಲ್ಲಿ ನಿಜಾಮ ಸರಕಾರದ ವಿರುದ್ಧ ಚಳುವಳಿಯನ್ನು ಆರಂಭಿಸಿ "ಸ್ಟೇಟ್ ಕಾಂಗ್ರೆಸ್ ಜಿಂದಾಬಾದ್, ನಿಜಾಮರೇ ನಮ್ಮ ಮೂಲಭೂತ ಹಕ್ಕನ್ನು ಕೊಡಿ" ಎಂಬ ಘೋಷಣೆಗಳನ್ನು ಕೂಗುತ್ತಾ ಚಳುವಳಿಯನ್ನು ತೀವ್ರಗೊಳಿಸಿದರು. ಅಪರಿಮಿತ ಕಾರ್ಯಕರ್ತರು ಇದರಲ್ಲಿ ಭಾಗವಹಿಸಿದರು. ನಿಜಾಮ ಸರಕಾರ ರೂಪಿಸಿದ ಕಾನೂನುಗಳನ್ನು ಮುರಿಯೋಣ ಎಂದು ಕಾರ್ಯಕರ್ತರಲ್ಲಿ ಅವರು ಮನವಿಮಾಡಿಕೊಂಡರು.

1946ರಲ್ಲಿ ಬಸವ ಜಯಂತಿಯನ್ನು ಯಾದಗಿರಿಯಲ್ಲಿ ಆಚರಿಸಲಾಯಿತು, ಇದರ ನಾಯಕತ್ವವನ್ನು ಮಲ್ಲಪ್ಪನವರು ವಹಿಸಿದ್ದರು. ಬಸವೇಶ್ವರರ ಪಲ್ಲಕ್ಕಿ ಊರ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಹೊರಡುವಾಗ ನಿಜಾಮ ಸರಕಾರದ ಪೋಲಿಸರು ಇದನ್ನು ತಡೆಯಲು ಪ್ರಯತ್ನಿಸಿದರು. ಕೆಲವು ಕಾರ್ಯಕರ್ತರು ನಿಜಾಮ ಪೋಲಿಸರಿಗೆ ಹೆದರಿ ಹೋದರು. ಮಲ್ಲಪ್ಪನವರು ಮೆರವಣಿಗೆಯಲ್ಲಿದ್ದ ಕಾರ್ಯಕರ್ತರನ್ನು ಉದ್ದೇಶಿಸಿ "ಮುನ್ನುಗ್ಗಿ ಕಾರ್ಯಕರ್ತರೇ, ಯಾವ ಸ್ಥಳದಿಂದ ಅದನ್ನು ತಂದಿದ್ದೇವೆ, ಆಸ್ಥಳದಲ್ಲೇ ಇಡೋಣ" ಎಂದು ಆದೇಶಮಾಡಿದರು. ಅನೇಕ ಮಿತ್ರರೊಂದಿಗೆ ಪಲ್ಲಕ್ಕಿಯನ್ನು ಹೊತ್ತಿದ್ದ ಪ್ರಮುಖ ಕಾರ್ಯಕರ್ತ ಮಲ್ಲಣ್ಣ ಅಂಬಿಗಾರ ಹಾಗೆಯೇ ಆಗಲಿ ಮಲ್ಲಪ್ಪಾಜಿಯವರೇ ನೀವು ಹೇಳಿದಂತೆ ಮಾಡುತ್ತೇನೆ ಎಂದು ಪಲ್ಲಕ್ಕಿಯನ್ನು ಹೊತ್ತುಕೊಂಡು ಪೋಲಿಸರನ್ನು ಎದುರಿಸಿಕೊಂಡು ಬಸವೇಶ್ವರರ ಗುಡಿಗೆ ಇಳಿಸಿದರು. ಇದಕ್ಕೆ ಅವರೇ ಸ್ಫೂರ್ತಿಯಾಗಿದ್ದರು.

ನಿಜಾಮನ ಈ ನೀತಿಯ ವಿರುದ್ಧ ಜನತೆ, ಅವರಿಗೆ ತೀವ್ರವಾದ ಹೋರಾಟವನ್ನು ಹಮ್ಮಿಕೊಳ್ಳುವಂತೆ ಒತ್ತಾಯಪಡಿಸಿದರು. ಅದಕ್ಕೆ ಅವರು ಕಾರ್ಯಕರ್ತರೇ ಸಹನೆಯನ್ನು ತಂದುಕೊಳ್ಳಿ. ಈಗಾಗಲೇ ಹೋರಾಟ ನಡೆಸಿಲ್ಲವೆ ಎಂದು ಹೇಳಿದರು. ಆ ಕಾಲದಲ್ಲಿ ಇತ್ತೆ–ಹಾದ–ಉಲ್ ಮುಸ್ಲಿಂರ

ಚಟುವಟಿಕೆಗಳು ಗಣನೀಯ ಪ್ರಮಾಣದಲ್ಲಿ ಹೆಚ್ಚಾಗಿ ಗುಲಬರ್ಗಾ ಅವರ ಪ್ರಮುಖ ಕೇಂದ್ರವಾಗಿತ್ತು. ರಜಾಕಾರರ ಕಾರ್ಯಚಟುವಟಿಕೆಗಳು ಭರದಿಂದ ಸಾಗಿದ್ದವು. ಅವರಿಂದ ಸೂಕ್ತ ರಕ್ಷಣೆ ಒದಗಿಸಿಕೊಡಲು, ಇವರ ಕಾರ್ಯಚಟುವಟಿಕೆಗಳನ್ನು ಸ್ಥಗಿತಗೊಳಿಸಲು ಮತ್ತು ಪ್ರತಿಭಟಿಸಲು ಮಲ್ಲಪ್ಪನವರು, ಜನಾರ್ಧನರಾವ ದೇಸಾಯಿಯವರು, ಜಿ ಪ್ರಾಣೇಶಾಚಾರ್ಯ, ಜಗನ್ನಾಥರಾವ ಚಂದ್ರಿಕಿ ಒಂದೆಡೆ ಸೇರಿ ಶಿಬಿರಗಳನ್ನು ಸಂಘಟಿಸುವ ಬಗ್ಗೆ ಪೂರ್ವಭಾವಿಯಾಗಿ ಚರ್ಚಿಸಿ ಒಂದು ನಿರ್ಧಾರಕ್ಕೆ ಬಂದರು.

ಈ ಸಂದರ್ಭದಲ್ಲಿ ಅಪಾರ ಸಂಖ್ಯೆಯ ಕಾರ್ಯಕರ್ತರು ಹಾಜರಿದ್ದರು. ಶಿಬಿರಗಳನ್ನು ಎಲ್ಲಿ ಸ್ಥಾಪಿಸಬೇಕು? ಒಂದೊಂದು ಶಿಬಿರಗಳ ನಾಯಕತ್ವ ಯಾರಿಗೆ ಒಪ್ಪಿಸಬೇಕು? ಇವುಗಳ ಮೇಲ್ವಿಚಾರಣೆ ಹೇಗೆ? ಯಾರು ಮಾಡಬೇಕು? ಎಂಬುದರ ಬಗ್ಗೆ ಸಭೆಯಲ್ಲಿ ಚರ್ಚಿಸಲಾಯಿತು. ಅಂದು ಸ್ವಾಮಿ ರಮಾನಂದ ತೀರ್ಥರು ಮಾರ್ಗದರ್ಶಕರಾಗಿದ್ದರು. ಶಿಬಿರಗಳನ್ನು ಗಡಿಗುಂಟ ಸ್ಥಾಪಿಸಬೇಕು. ಒಂದೊಂದು ಶಿಬಿರಗಳನ್ನು ಒಬ್ಬ ದಕ್ಷ ವ್ಯಕ್ತಿಯ ನಾಯಕತ್ವಕ್ಕೇ ವಹಿಸಿಕೊಡಬೇಕು. ಆ ಶಿಬಿರಗಳ ಮೇಲ್ವಿಚಾರಣೆಯ ನಾಯಕತ್ವವನ್ನು ಕೊಲೂರು ಮಲ್ಲಪ್ಪ, ಜನಾರ್ಧನರಾವ್ ದೇಸಾಯಿ, ಜಗನ್ನಾಥರಾವ್ ಚಂದ್ರಿಕಿ, ರಾಮಚಾರಿ ಮತ್ತು ಪ್ರಾಣೇಶಾಚಾರಿ ವಹಿಸಿಕೊಳ್ಳುವಂತೆ ಬಂದು ಸೇರಿದ್ದ ಅಪಾರ ಸಂಖ್ಯೆಯ ಕಾರ್ಯಕರ್ತರು ಮನವಿ ಮಾಡಿಕೊಂಡರು.

ಆಗ ಯಾದಗಿರಿಯಲ್ಲಿ ಕಾಂಗ್ರೆಸ್ ನಾಯಕರೂ ವಿಮೋಚನೆ ನೇತಾರರೂ ಆಗಿದ್ದ ಮಲ್ಲಪ್ಪನವರು ಹೈದ್ರಾಬಾದ್ ಕರ್ನಾಟಕದ ವಿದ್ಯಾರ್ಥಿ ಒಕ್ಕೂಟದ ಸಂಘಟಕರಲ್ಲಿ ಪ್ರಮುಖರಾಗಿದ್ದರು. ಜನತೆಯನ್ನು ಚಳುವಳಿಯಲ್ಲಿ ಭಾಗವಹಿಸುವಂತೆ ಕರೆನೀಡುತ್ತಿದ್ದರು. ತಮ್ಮ ಹೋರಾಟವು ಯಾವುದೇ ಅಹಿತಕರ ಘಟನೆಗಳಿಗೆ ಅವಕಾಶ ಮಾಡಿಕೊಡದೆ ಶಾಂತ ರೀತಿಯಿಂದ ಮಾಡುವುದಾಗಿರಬೇಕು, ಎಂದು ಕಾರ್ಯಕರ್ತರಲ್ಲಿ ಪದೇ ಪದೇ ಮನವಿಮಾಡಿಕೊಂಡರು. ಇತರ ಸಂಘಟಕರಲ್ಲಿ ವಿರುಪಾಕ್ಷಪ್ಪ ಎಕ್ಕೇಳ್ಳಿ ವಕೀಲರು ಹಾಗೂ ಎಂ, ನಾಗಪ್ಪ ಅವರನ್ನು ಸ್ಮರಿಸುವುದು ಹೆಚ್ಚು ಸಮಂಜಸ ಎನಿಸುತ್ತದೆ.

1946–1947ರಲ್ಲಿ ಗುಲಬರ್ಗಾ ಜಿಲ್ಲೆಯಲ್ಲಿ ಬಂಧಿತರಾಗಿದ್ದವರ ಸಂಖ್ಯೆ ಗಣನೀಯವಾಗಿತ್ತು. ಮೂರನೆಯ ಸಾರಿ 23.3.1947 ರಲ್ಲಿ ಯಾದಗಿರಿಯಲ್ಲಿ ಮಲ್ಲಪ್ಪನವರನ್ನು ಬಂಧಿಸಲಾಯಿತು. ಯಾದಗಿರಿಯಿಂದ ಅವರನ್ನು ಗುಲಬರ್ಗಾ ಕೇಂದ್ರ ಕಾರಗೃಹಕ್ಕೆ ವರ್ಗಾಯಿಸಿದರು ಅವರ ಬಂಧನವಾಗುತ್ತದೆ ಎಂದು ಯಾರು ತಿಳಿದಿರಲಿಲ್ಲ. ಆದರೆ ಅವರ ಮಿತ್ರರಾದ ಕಮ್ಯುನಿಷ್ಟರು ಇಡೀ ಹೈದ್ರಾಬಾದ್ ಸಂಪೂರ್ಣವಾಗಿ ತಿರುಗಿ ನೋಡಿದಾಗ ಅವರು ಗೈರು ಹಾಜರಿದ್ದರು. ಅವರ ನಿವಾಸಕ್ಕೆ ಅವರ ಮಿತ್ರರೆಲ್ಲರೂ ಬಂದು ವೀಕ್ಷಿಸಿದಾಗ ಅವರೆಲ್ಲರಿಗೂ ಮನವರಿಕೆಯಾಯಿತು. ಏಕೆಂದರೆ ಅವರನ್ನು ಬಂಧಿಸಿ ಗುಲಬರ್ಗಾ ಜೈಲಿಗೆ ಹಾಕಿದ್ದಾರೆಂಬುದು ಆಗ ರವಿನಾರಾಯಣ ರೆಡ್ಡಿ ಕಮ್ಯುನಿಷ್ಟ ಮುಖಂಡರಾಗಿದ್ದರಲ್ಲದೆ ಮತ್ತುಅವರ ಆತ್ಮೀಯ ಮಿತ್ರರಾಗಿದ್ದರು. ಇವರನ್ನು ಸಹಿತ ಬಂಧಿಸಿದ್ದರು. ಹಾಗೆಯೇ ಮಲ್ಲಪ್ಪನವರ ಸಹೋದರನ್ನು ಬಂಧಿಸಿದರು. ಇತ್ತಕಡೆ ಅವರ ಕುಟುಂಬದ ಸದಸ್ಯರು

ಜೈಲಿಗೆ ಹೋಗುವ ಪ್ರಸಂಗ ಒದಗಿಬಂದಿತು. ಅವರ ಬಂಧನವು 3ನೇಯ ಸಾರಿ ಆದಾಗ ಅವರ ಧರ್ಮಪತ್ನಿಯವರಿಗೆ ಗಾಢವಾದ ಪರಿಣಾಮ ಬೀರಿ ಅವರಿಗೆ ಕಾಯಿಲೆ ಬರಲಿಕ್ಕೆ ದಾರಿ ಮಾಡಿಕೊಟ್ಟಂತಾಯಿತು. ಅವರ ಪತ್ನಿ ಮಾನಸಿಕವಾಗಿ ತೊಂದರೆಗೆ ಒಳಪಟ್ಟು ಅಸ್ವಸ್ಥರಾದರು.

ಅವರ ಮನಸ್ಸು ತನ್ನ ಆತ್ಮದಂತೆ ಇದ್ದ ಪತ್ನಿಯನ್ನು ಭೇಟಿಯಾಗಲು ಹಾತೊರೆಯುತ್ತಿತ್ತು. ಆದರೆ ಅದು ಅಷ್ಟೊಂದು ಸುಲಭವಾದ ಕೆಲಸವಾಗಿರಲಿಲ್ಲ. ಆದರೂ ಕೂಡ ಆ ಮಹಾತಾಯಿ ತನ್ನ ಅನುಪಸ್ಥಿತಿಯಲ್ಲು ಪತಿಯನ್ನು ಕರೆಸಲು ತನ್ನ ಬಂಧು ಒಬ್ಬನನ್ನು ಜೇಲಾಧಿಕಾರಿಯಲ್ಲಿ ವಿನಂತಿಸಿಕೊಂಡು, ಕರೆತರಲು ಕಳಿಸಿದರು. ಕಲ್ಲು ಹೃದಯದ ಆ ವ್ಯಕ್ತಿಯು ಆ ವಿನಂತಿಯನ್ನು ಮಾನ್ಯ ಮಾಡದೇ, ಮಲ್ಲಪ್ಪನವರನ್ನು ಬಿಡಲು ನಿರಾಕರಿಸಿದರು. ಈ ಸುದ್ದಿ ತಿಳಿದಕೊಡಲೇ ಪತಿಯ ಮುಖದರ್ಶನವಾಗದ ಕಾರಣ ಅವರ ದೇಹಸ್ಥಿತಿಯು ಮತ್ತಷ್ಟು ಹದಗೆಟ್ಟಿತು.

ಇತ್ತ ಕಡೆಗೆ ಅವರು ಧರ್ಮಪತ್ನಿಯ ಅನಾರೋಗ್ಯ ನಿಮಿತ್ತ ಚಿಂತೆಗೀಡಾಗಿದ್ದರು. 1947 ಆಗಷ್ಟ್ 15ರಂದು ಅವರು ಜೇಲಿನಲ್ಲಿ ಕಳೆಯಬೇಕಾಯಿತು. ಆದರೆ ಅದೇ ಮರು ದಿವಸ 16.8.1947 ಅವರ ಬದುಕಿನಲ್ಲಿ ಕರಾಳ ದಿನವಾಗಿತ್ತು. ಅವರ ಜೀವನ ಜ್ಯೋತಿಯೊಂದು ಕಣ್ಮರೆಯಾಯಿತು. ಅಂದರೆ ಧರ್ಮಪತ್ನಿ ಸ್ವರ್ಗಸ್ಥರಾದರು. ಅವರ ಧರ್ಮಪತ್ನಿ ಮೂವರು ಮಕ್ಕಳನ್ನು ಬಿಟ್ಟು ಹೋಗಿದ್ದರು. ಅವರುಗಳ ವಯಸ್ಸು ಅನುಕ್ರಮವಾಗಿ 4–6–8 ಇತ್ತು ಜೈಲಿನಲ್ಲಿದ್ದ ಅವರು ಪತ್ನಿಯ ಮರಣದ ವಾರ್ತೆ ಕೇಳಿ ಗರಬಡಿದಂತಾಯಿತು. ಅವರು ಅತೀವ ದುಃಖಪಟ್ಟರು. ಅವರ ಬದುಕಿನಲ್ಲಿ ಅವರ ಶ್ರೀಮತಿಯವರ ಪಾತ್ರ ಹಿರಿದಾಗಿತ್ತು. ಅವರ ಸ್ವಭಾವ, ಸಹನಶೀಲತೆ ಇತರರಿಗೆ ಮಾದರಿಯಾಗಿತ್ತು. ಎಲ್ಲರನ್ನು ವಿಶಾಲಾತ್ಮಕ ದೃಷ್ಟಿಕೋನದಿಂದ ಕಾಣುವ ಅವರ ಭಾವನೆ, ದಾಂಪತ್ಯ ರಸಗಳಿಗೆಗಳು, ತನ್ನ ಬಂಧನದಿಂದ ಅವಳಿಗಾಗಿರುವ ಯಾತನೆಗಳು, ಅವಳೊಂದಿಗೆ ಕಳೆದ ದಿನಗಳು ಅವರ ಕಣ್ಣ ಮುಂದೆ ಕಟ್ಟಿದಂತಾಯಿತು, ಮಲ್ಲಪ್ಪನವರ ಹೃದಯ ನೋವಿನಿಂದ ಜರ್ಜರಿತವಾಗಿತ್ತು. ಏಕೆಂದರೆ ಈ ಒಂದು ಅಂಶ ಎಂತಹ ಕಲ್ಲು ಹೃದಯದ ವ್ಯಕ್ತಿಯನ್ನು ಕರಗಿಸುವ ಹೃದಯ ವಿದ್ರಾವಕ ಘಟನೆಯಾಗಿತ್ತು. ಅವರು ಶ್ರೀಮತಿಯವರ ಅಂತಿಮ ದರ್ಶನಕ್ಕಾಗಿ ಹಾತೋರೆಯುತ್ತಿದ್ದರು. ಆದರೆ ವಿಧಿ ಅವರ ಬದುಕಿನಲ್ಲಿ ಚೆಲ್ಲಾಟ ನಡೆಸಿತ್ತು. ದುಷ್ಟ ಬುದ್ಧಿಯನ್ನು ಬಂಡವಾಳವಾಗಿಟ್ಟು ಕೊಂಡ ಕಠಿಣ ಹೃದಯದ ಜೈಲರನು ಅವರನ್ನು ಅವರ ಶ್ರೀಮತಿಯವರ ಅಂತಿಮ ದರ್ಶನಕ್ಕೆ ಹೋಗಲು ಅವಕಾಶ ಮಾಡಿಕೊಡಲಿಲ್ಲ. ಒಂದು ದಿನ ಮಟ್ಟಿಗಾದರೂ ಹೋಗಿ ಬರಲು ಅವರ ಜೈಲರನ್ನು ಕೇಳಿಕೊಂಡರು. ಸ್ವಾರ್ಥ ಸಾಧನೆಯ ತಳಹದಿಯ ಮೇಲೆ ತನ್ನ ನೀತಿಯನ್ನು ಹೊಂದಿದ್ದ ಜೈಲರ ಇದನ್ನು ನಿರಾಕರಿಸಿದನು. ಅವರಿಗೆ ಮನಸ್ಸು ಭಾರವಾಗಿ ಆಕಾಶವೇ ಮೈಮೇಲೆ ಹರಿದು ಬಿದ್ದಂತಾಯಿತು. ಎಂಥವರ ಹೃದಯವನ್ನೂ ಹಿಂಡುವ ಘಟನೆ ಇದಾಗಿತ್ತು.

ಅವರು ಗಾಂಧೀಜಿಯವರ ತತ್ವಗಳ ಅನುಯಾಯಿಯಾಗಿದ್ದರಿಂದ ಸಹನೆಯನ್ನು ತಂದುಕೊಳ್ಳುವುದು ಅನಿವಾರ್ಯವಾಗಿತ್ತು. ಮನಸ್ಸನ್ನು ಗಟ್ಟಿಮಾಡಿಕೊಂಡು ಅವರು ಜೇಲಿನಲ್ಲಿ ಕಾಲ ಕಳೆಯಬೇಕಾಯಿತು. ಸರ್ಕಾರವು ಅವರಿಗೆ ಯಾವ ಪರಿಸ್ಥಿತಿಯಲ್ಲಿಯೂ ಹೊರಗೆ ಬಿಡುವುದಕ್ಕೆ ಮುಂದು ಬರಲಿಲ್ಲ. ಕೊನೆಗೆ ಅವರಿಗೆ ಶ್ರೀಮತಿಯವರ ಶವಸಂಸ್ಕಾರವೂ ದೊರೆಯದಂತಾಯಿತು.

ತಮ್ಮ ಸಹೃದಯ ವ್ಯಕ್ತಿತ್ವದಿಂದ ಹಾಗೂ ಹೈದ್ರಾಬಾದಿಗೆ ಹೆಚ್ಚಿಗೆ ಹೋಗಿ ಬರುವುದರಿಂದಾಗಿ ಅವರಿಗೆ ಅಂದಿನ ಗೃಹ ಮಂತ್ರಿಯ ಪರಿಚಯವಿತ್ತು. ಅಂದಿನ ಗೃಹಮಂತ್ರಿಯ ಹೆಸರು ಮೋಹಿನ್ ನವಾಬ್ ಬಹಾದ್ದೂರ, ಅವರ ಶ್ರೀಮತಿಯ ಸಾವಿನ ಸುದ್ದಿ ತಿಳಿದ ಅವರನ್ನು ಅಂತ್ಯ ಸಂಸ್ಕಾರಕ್ಕೆ ಬಿಡದೇ ಇದ್ದ ವಿಷಯ ತಿಳಿದು ಗೃಹಮಂತ್ರಿಗೆ ಕೆಡುಕು ಎನಿಸಿರಬಹುದು. ಏಕೆಂದರೆ ಗೃಹ ಮಂತ್ರಿಯು ಉತ್ತಮ ವ್ಯಕ್ತಿಯಾಗಿದ್ದ, ಪ್ರಮಾಣಿಕತೆಗೆ ಹೆಸರಾಗಿದ್ದ, ಅತನ ಭಾವನೆಗಳು ಸಂಕುಚಿತವಾಗಿರದೇ ವಿಶಾಲಾತ್ಮಕತೆಯಿಂದ ಕೂಡಿದವುಗಳಾಗಿದ್ದವು. ಅವರನ್ನು ಭೇಟಿಯಾಗಲು ಗುಲ್ಬರ್ಗಾಕ್ಕೂ ಬರುವುದಾಗಿ ಸುಬೇದಾರನಿಗೆ ಪೂರ್ವಭಾವಿಯಾಗಿ ತಿಳಿಸಿದರು. ಗುಲ್ಬರ್ಗಾಕ್ಕೆ ಆಗಮಿಸಿದ ಗೃಹಮಂತ್ರಿಗಳು ಐವಾನ್–ಶಾಹಿಯಲ್ಲಿ ವಾಸ್ತವ್ಯಹೂಡಿ ಸುಬೇದಾರನಿಗೆ ಬರಲು ತಿಳಿಸಿದರು. ಸುಬೇದಾರ ಅಲ್ಲಿಗೆ ಧಾವಿಸಿ ತನ್ನಿಂದ ಏನು ಕಾರ್ಯವಾಗಬೇಕಾಗಿದೆ ಎಂದು ವಿನಂತಿಸಿಕೊಂಡಾಗ, ಗೃಹ ಮಂತ್ರಿಯವರು ಕೊಲೂರು ಮಲ್ಲಪ್ಪ ಅವರನ್ನು ಭೇಟಿಯಾಗಬೇಕಾಗಿದೆ ಎಂದರು ಸುಬೇದಾರರು ಅವರನ್ನು ಇಲ್ಲಿಗೆ ಕರೆತರಿಸುತ್ತೇನೆ ಎಂದಾಗ ಗೃಹಮಂತ್ರಿ "ಸುಬೇದಾರರೇ ಅವರನ್ನು ಕರೆಯುವುದು ಸಮಂಜಸವಾಗಿರಲಿಕ್ಕಿಲ್ಲ. ನಾವೇ ಖುದ್ದಾಗಿ ಅವರನ್ನು ಭೇಟಿಯಾಗಿ ಹಲವು ವಿಷಯಗಳ ಬಗ್ಗೆ ಅವರೊಡನೆ ಮಾತನಾಡಬೇಕಾಗಿದೆ ಎನ್ನುತ್ತಾರೆ.

ಸುಬೇದಾರನು ಗೃಹಮಂತ್ರಿಯನ್ನು ಮಲ್ಲಪ್ಪನವರು ಇದ್ದ ಜೈಲಿಗೆ ಕರೆದುಕೊಂಡು ಬಂದನು. ಗೃಹಮಂತ್ರಿಯವರು ಸುಬೇದಾರನನ್ನು ಅಲ್ಲಿಯೇ ಹೊರಗಡೆ ಬಿಟ್ಟು ತಾವು ನಡೆದುಕೊಂಡೆ ಹೋಗಿ ಜೈಲಿನ ಅಧಿಕಾರಿಗೆ ತಾವು ಕುಳಿತುಕೊಳ್ಳುವ ರೂಮಿಗೆ ಅವರನ್ನು ಕರೆಸಲು ಆದೇಶನೀಡಿದರು. ಅವರು ಗೃಹಮಂತ್ರಿಯವರನ್ನು ನಮ್ರತೆಯಿಂದ ನಮಸ್ಕಾರ ಎಂದರು ಪ್ರತಿ ನಮಸ್ಕಾರ ಹೇಳಿ ಗೃಹಮಂತ್ರಿಯವರು ಕುಳಿತುಕೊಳ್ಳುವ ಆಸನ ತೋರಿಸಿ ಮಾತನ್ನು ಮುಂದುವರೆಸುತ್ತಾರೆ. ಮಲ್ಲಪ್ಪನವರೆ ಈ ದಿನ ನಾನು ಉದ್ದೇಶ ಪೂರ್ವಕವಾಗಿ ನಿಮ್ಮನ್ನು ಭೇಟಿ ಮಾಡಲು ಬಂದಿರುವೆ. ನನ್ನಿಂದ ಒಂದು ಅಚಾತುರ್ಯ ನಡೆದು ಹೋಯಿತು. ನಿಮ್ಮ ಹೆಂಡತಿಯ ಸಾವಿನ ವಿಷಯವನ್ನು ತಲುಪಿಸುವಲ್ಲಿ ಅಧಿಕಾರಿಗಳು ವಿಳಂಬ ಮಾಡಿದ್ದಾರೆ. ಇದಕ್ಕೆ ನಾನೇ ಹೊಣೆಗಾರ. ನನ್ನನ್ನು ಕ್ಷಮಿಸಿಬಿಡಿ ಎಂದು ಗೃಹಮಂತ್ರಿ ಹೇಳಿದರು.

ಅವರು ಅಷ್ಟೇ ವಿನಯದಿಂದ ಎರಡು ಕೈಗಳನ್ನು ಜೋಡಿಸಿ ಸಾಹೇಬ್ರ ತಾವು ಕ್ಷಮಿಸಿ ಎಂದು ಹೇಳುವ ಅವಶ್ಯಕತೆಯಿಲ್ಲ ಅದು ಮುಗಿದು ಹೋದ ಅಧ್ಯಾಯ ಮತ್ತು ಕಳೆದು ಹೋದ ಸಂಗತಿ ಅದನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳುವುದರಿಂದ ಏನುತಾನೇ ಪ್ರಯೋಜನ? ಎಂದು ಹಸನ್ಮುಖದಿಂದ ಹೇಳಿದರು. ಅವರ ಮಾತುಗಳನ್ನು ಕೇಳಿ ಗೃಹಮಂತ್ರಿಯವರು ಒಂದು ಕ್ಷಣ ಸ್ತಂಭೀಭೂತರಾದರು. ಗೃಹಮಂತ್ರಿಯವರು ಮಾತನ್ನು ಮುಂದುವರೆಸಿದರು ಮಲ್ಲಪ್ಪನವರೇ ನಿಮ್ಮ ಬಗ್ಗೆ ನಾನು ಹೊಸ ವಿಷಯವನ್ನು ಕೇಳಿದ್ದೇನೆ. ಇದು ಅಪಾಯವನ್ನುಂಟು ಮಾಡುವ ಸಂಭವ ಹೆಚ್ಚಾಗಿದೆ. ಅದೇನೆಂದರೆ ನಿಮ್ಮ ಸಂತತಿಯನ್ನು ನಿರ್ಮೂಲನ ಮಾಡಲು ಕೆಲವೊಂದು ದುಷ್ಟಶಕ್ತಿಗಳು ಕಾದುಕುಳಿತಿವೆ ಎಂದು ನನಗೆ ಸುದ್ದಿ ಮುಟ್ಟಿದೆ.

ಅದಕ್ಕೆ ನೀವು ಹುಷಾರಾಗಿರಬೇಕು. ಇದಕ್ಕೆ ಅವಕಾಶ ಮಾಡಿಕೊಡಬಾರದು. ಅದಕ್ಕಾಗಿ ನಾನು ಇಲ್ಲಿಗೆ ಬಂದಿದ್ದೇನೆ. ನಿಮ್ಮನ್ನು ಹತ್ತು ದಿವಸದ ಮಟ್ಟಿಗೆ ಪೆರೋಲ್ ಮೇಲೆ ಬಿಡುತ್ತೇನೆ. ನೀವು ಹೋಗಿ ಮಕ್ಕಳನ್ನು ಹೈದ್ರಾಬಾದ್ ರಾಜ್ಯ ಬಿಟ್ಟು ಬೇರೆ ಕಡೆಗೆ ನೆಲೆಸುವಂತೆ ವ್ಯವಸ್ಥೆ ಮಾಡಿ ಬನ್ನಿ ಎಂದು ಹೇಳಿದರು. ಜೇಲರನಿಗೆ ಮಲ್ಲಪ್ಪನವರನ್ನು ಜಾಮೀನು ರಹಿತವಾಗಿ ಬಿಡಲು ಆದೇಶಿಸಿ ಹೈದ್ರಾಬಾದ್‌ಗೆ ತೆರಳಿದರು. ಅವರಿಗೆ ತಾನು 10 ದಿವಸದ ಮಟ್ಟಿಗೆ ಹೋಗುವುದು ಹೆಚ್ಚು ಸೂಕ್ತ ಎನಿಸಿತು. ಅಷ್ಟರೊಳಗೆ ಇವರ ಕೆಲವು ಕಾರ್ಯಕರ್ತರು ಜೈಲಿನಲ್ಲಿ ಇದ್ದರೂ ಸಹ ಹೋರಾಟಗಾರ ಚಂದ್ರಕಿಯವರು ಅವರ ಜೊತೆಯಲ್ಲಿ ಇದ್ದರು.

ಅವರು 10 ದಿವಸ ಹೋಗುವ ಮುನ್ನ ಜೈಲಿನಲ್ಲಿದ್ದ ಸಹುದ್ಯೋಗಿಗಳೆಲ್ಲರಿಗೂ ತಾನು ಹೋಗುವುದಾಗಿ ತಿಳಿಸಿದರು. ಜೇಲಿನಲ್ಲಿದ್ದ ಎಲ್ಲಾ ಕಾರ್ಯಕರ್ತ ಮಿತ್ರರು ಅವರಿಗೆ ಕೈ ಜೋಡಿಸಿ ಹೇಳಿದರು. ನೀವು ಮತ್ತೆ ಈ ಕಡೆಗೆ ಬರಬೇಡಿರಿ. ಪರಾರಿಯಾಗಿರಿ. ಏಕೆಂದರೆ ಅಲ್ಲಿ ಹೋರಾಟದ ಕಾರ್ಯಗಳು ಅಸ್ತವ್ಯಸ್ತಗೊಂಡಿವೆ. ಅವುಗಳನ್ನು ಚುರುಕುಗೊಳಿಸುವ ಕಾರ್ಯ ನಿಮ್ಮ ಮೇಲೆ ಇದೆ. ಎಂದು ಹೇಳಿದರು. ಅಲ್ಲಿ ಎಲ್ಲರೂ ನಿಮ್ಮ ದಾರಿಯನ್ನು ಕಾಯುತ್ತಿದ್ದಾರೆ. ಎಂದು ಹೇಳಿ ಅವರಿಗೆ ಹೋಗಲು ಒತ್ತಾಯಿಸಿದರು. ಅವರು ಹೋಗಲು ನಿರ್ಧರಿಸಿದರು.

ಆದರೆ ಜೈಲರನು ಅವರ ವ್ಯಕ್ತಿತ್ವದ ಪರಿಚಯವನ್ನ ನೋಡಿ ಇವರನ್ನು ಬಿಡುವುದು ಅವನ ಸ್ವಾರ್ಥ ಬುದ್ಧಿಗೆ ಸೂಕ್ತ ವೆನಿಸಲಿಲ್ಲ. ಏಕೆಂದರೆ ಅವರನ್ನು ಬಿಟ್ಟರೆ ಅವರ ಹಿಂದೆ ಅಪಾರ ಜನಸ್ತೋಮವಿದೆ. ಅವರು ಮತ್ತೆ ಹೋರಾಟಕ್ಕೆ ಇಳಿಯುತ್ತಾರೆ ಎಂಬುದು ಅವನ ಉದ್ದೇಶವಾಗಿತ್ತು. ಮತ್ತೊಂದೆಡೆಗೆ ಅವರನ್ನು ಇಟ್ಟುಕೊಳ್ಳವಂತೆಯೂ ಇರಲಿಲ್ಲ. ಏಕೆಂದರೆ ಗೃಹಮಂತ್ರಿಯವರು ಬಿಡಲು ನಿರ್ಧರಿಸುವುದು ಅನಿವಾರ್ಯ ಕ್ರಮವಾಗಿತ್ತು. ಬಿಡುವ ಪೂರ್ವದಲ್ಲಿ ಜೈಲರನು ಒಂದು ಕರಾರು ಹಾಕಿದನು. ಅದೇನೆಂದರೆ ಅವರು ನೇರವಾಗಿ ಯಾದಗಿರಿಗೆ ಹೋಗಕೂಡದು. ಅವರು ತಮ್ಮ ಹೆಂಡತಿಯ ತವರು ಮನೆಯಾದ ರಾಯಚೂರಿನ ಸಮೀಪವಿದ್ದ ರಾಂಪುರಕ್ಕೆ ಹೋಗಬೇಕು ಎಂದು ಆದೇಶಿಸಿದರು.

ಏಕೆಂದರೆ ಅದು ಅವರ ಧರ್ಮಪತ್ನಿಯ ತವರೂರಾಗಿತ್ತು. ಅಲ್ಲಿ ಅವರ ಹೆಂಡತಿಯ ಸಮಾಧಿ ಇತ್ತು. ಅವರು 11–9–1947 ರಂದು ಬಿಡುಗಡೆಯಾಗಿ ನೇರವಾಗಿ ರಾಯ್ಚೂರಿಗೆ ಹೋದರು. ರಾಯಚೂರು ಅವರ ಹೆಂಡತಿಯು ನೆಲಸಿದ ಮನೆಯಾಗಿತ್ತು. ಮನೆಗೆ ಹೋದಾಗ ಮಡದಿ ಇಲ್ಲದ ಮನೆ ಬಣಗುಡುತ್ತಿತ್ತು. ತನ್ನನ್ನು ಪ್ರೀತಿಯಿಂದ ಬರಮಾಡಿಕೊಳ್ಳುವ ಆತ್ಮೀಯ ಜೀವವೊಂದು ಅಲ್ಲಿಲ್ಲ. ಮನಸ್ಸು ಬಹಳನೊಂದು ಅವರಿಗೆ ದುಃಖ ಒತ್ತರಿಸಿ ಬಂತಾದರೂ ತಾಳ್ಮೆ ಶಕ್ತಿಯಿಂದ ಅವರು ಅದನ್ನು ನಿಯಂತ್ರಿಸಿದರು.

ಅವರು ಅತ್ತೆಯವರನ್ನು ಕಂಡು ಅವರಿಗೆ, ಸಾಂತ್ವನ ಹೇಳಿ ತನಗೆ ಗೃಹಮಂತ್ರಿಯು ಹೇಳಿದ ಎಲ್ಲಾ ವಿಷಯವನ್ನು ಅತ್ತೆಯ ಮುಂದೆ ವಿವರವಾಗಿ ಹೇಳಿದರು. ಅವರ ಬದುಕಿನಲ್ಲಿ ಅವರ

ಅತ್ತೆಯ ಪಾತ್ರ ಅನುಪಮವಾಗಿದೆ. ಅವರ ಅತ್ತೆಯವರು ಅಷ್ಟೇ ಮೃದು ಸ್ವಭಾವದವರಾಗಿದ್ದರು. ಅವರ ಅತ್ತೆಯ ಕಡೆ ಸಂಬಂಧಿಕರು ಮಂತ್ರಾಲಯದ ಕೊನೆಯ ಭಾಗದಲ್ಲಿ ನೆಲೆಸಿದ್ದರಿಂದ ಅವರ ಮೂವರು ಮಕ್ಕಳನ್ನು ಅವರ ಅತ್ತೆಯವರು ಅಲ್ಲಿ ಬಿಟ್ಟುಬರಲು ಒಪ್ಪಿದರು

ಅವರು ಬಂದ ಸುದ್ದಿ ತಿಳಿದ ಕಾರ್ಯಕರ್ತರು ಶರವೇಗದಲ್ಲಿ ಅವರ ಭೇಟಿಗಾಗಿ ಧಾವಿಸಿ ಬರತೊಡಗಿದರು. ಪೆರೋಲ್ ಗಡುವು ಮುಗಿಯುವುದಕ್ಕೆ ಇನ್ನು 5–6– ದಿನ ಬಾಕಿ ಇತ್ತು. ಅವರನ್ನು ಭೇಟಿಯಾಗಿದ್ದ ಎಲ್ಲಾ ಕಾರ್ಯಕರ್ತರು ಅವರನ್ನು ಪರಾರಿಯಾಗಲು ಒತ್ತಾಯಪಡಿಸತೊಡಗಿದರು. ಆದರೆ ಗಾಂಧೀಜಿಯ ತತ್ವಗಳು ಆದಾಗಲೇ ಮಲ್ಲಪ್ಪನವರ ಮೇಲೆ ಪ್ರಭಾವ ಬೀರಿದ್ದರಿಂದ ಪರಾರಿಯಾಗಲು ಅವರ ಮನಸ್ಸು ಒಪ್ಪಲಿಲ್ಲ. ಏಕೆಂದರೆ ಗೃಹಮಂತ್ರಿಯವರು ತಮ್ಮ ಮೇಲೆ ವಿಶ್ವಾಸ ಇಟ್ಟು ನನ್ನನ್ನು ಬಿಟ್ಟಿದ್ದಾರೆ. ಎಂದ ಮೇಲೆ ಅವರ ವಿಶ್ವಾಸಕ್ಕೆ ನಾನು ದ್ರೋಹ ಬಗೆದಂತೆ ಆಗುತ್ತದೆ. ಎಂಬುದು ಅವರ ತತ್ವವಾಗಿತ್ತು. ಹೀಗಾಗಿ ಅವರು ಪರಾರಿಯಾಗಲು ನಿರಾಕರಿಸಿದರು.

ಇಷ್ಟೊತ್ತಿಗಾಗಲೇ ಕಾಂಗ್ರೆಸ್ ಕಾರ್ಯಕರ್ತರಲ್ಲಿ ಆಂತರಿಕ ವೈಮನಸ್ಸುಗಳಿಂದ ಅಣ್ಣಾರಾವ್ ಗಣಮುಖಿಯವರು ಹೋರಾಟವನ್ನು ಮಾಡದೇ ನಿಷ್ಕ್ರಿಯವಾಗಿ ಮನೆಯಲ್ಲಿ ಕುಳಿತಿದ್ದರು. ಮಲ್ಲಪ್ಪನವರು ಅವರಲ್ಲಿಗೆ ಧಾವಿಸಿ ಹೋಗಿ ಅಣ್ಣಾರಾವ್ ಗಣಮುಖಿಯವರನ್ನು ಹೋರಾಟಕ್ಕೆ ಇಳಿಯಲು ಹುರಿದುಂಬಿಸಿದರು. ನಿಷ್ಕ್ರಿಯರಾಗಿದ್ದ ಅಣ್ಣಾರಾವ್ ಗಣಮುಖಿಯು ಅವರಿಂದ ಸ್ಫೂರ್ತಿಪಡೆದು ಪುನಃ ಹೋರಾಟಕ್ಕೆ ಅವರ ಜೊತೆಗೆ ಸಿದ್ಧರಾದರು. ಎಡಬಿಡದೆ ಕಾರ್ಯಕರ್ತರು ಒತ್ತಾಯದಿಂದ ಅವರು ತಾವು ಪರಾರಿಯಾಗುವುದಕ್ಕಿಂತ ಪೂರ್ವದಲ್ಲಿ ಈ ವಿಷಯವನ್ನು ಗೃಹಮಂತ್ರಿಗೆ ತಿಳಿಸಿ ಮುಂದಿನ ತೀರ್ಮಾನಕ್ಕೆ ಬರುವುದು ಹೆಚ್ಚು ಸೂಕ್ತವೆನಿಸಿದ ಅವರು ಈ ಪ್ರಯುಕ್ತ ಹೈದ್ರಾಬಾದ್‌ನಲ್ಲಿ ಇದ್ದ ಗೃಹಮಂತ್ರಿಯವರಿಗೆ ತಾನು ಅವರನ್ನು ಬೇಟಿಯಾಗುವುದಾಗಿ ಫೋನ್ ಮಾಡಿದರು.

ಆ ಕಾಲದಲ್ಲಿ ಗೃಹಮಂತ್ರಿಯವರನ್ನು ಭೇಟಿಮಾಡುವುದು ಅಷ್ಟೊಂದು ಸುಲಭದ ಕೆಲಸವಾಗಿರಲಿಲ್ಲ, ಮೇಲಾಗಿ ಅವರ ಗಾಂಧಿಟೋಪಿ ಖಾದಿ ಅಂಗಿಯನ್ನು ಪೋಲಿಸರು ವಿರೋಧಿಸುತ್ತಿದ್ದರು. ಅವರು ಗೃಹಮಂತ್ರಿಯನ್ನು ಭೇಟಿಯಾಗಲು ಹೈದ್ರಾಬಾದಿಗೆ ನಡೆದರು. ಪೋಲಿಸರು ಅವರನ್ನು ನೋಡಿ ಎಲ್ಲಿಗೆ ಹೋಗುವುದು ಎಂದು ವಿಚಾರಿಸಿದರು. ಅವರು ಸತ್ಯವನ್ನು ಮರೆಮಾಚದ ವ್ಯಕ್ತಿಯಾಗಿದ್ದರಿಂದ ಅವರು ನಿಜವಾದ ವಿಷಯವನ್ನು ಹೇಳಿದರು. ಅದು ಪೋಲಿಸರಿಗೆ ತಮಾಷೆಯ ವಿಷಯವಾಗಿ ಪರಿಣಮಿಸಿತು. ನಡೆ ನೀವು ಗೃಹಮಂತ್ರಿಗೆ ಭೇಟಿಯಾಗಬೇಕೆ ಎಂದು ಅಪಹಾಸ್ಯ ಮಾಡಿದರು. ಅವರನ್ನು ಹಿಡಿದುಕೊಂಡು ಹೋದರು.

ಗೃಹಮಂತ್ರಿ ಛೇಂಬರ ಹತ್ತಿರ ಹೋದಾಗ ಅವರನ್ನು ನೋಡಿ ಗೃಹಮಂತ್ರಿ ಅವರನ್ನು ಬಿಟ್ರಿ ಏಕೆ ಹಿಡಿದಿದ್ದೀರಿ ಎಂದು ಹೇಳಿದರು. ಆಗ ನಮಸ್ಕಾರ ಸಾಹೇಬ್ರ. ಎಂದು ತಮ್ಮ ಎರಡೂ ಕೈಗಳನ್ನು ಜೋಡಿಸಿ ವಿನಮ್ರತೆಯಿಂದ ಹೇಳಿದಾಗ, ಅದನ್ನು ಅಷ್ಟೇ ಗೌರವದಿಂದ ಸ್ವೀಕರಿಸಿದ ಗೃಹಮಂತ್ರಿಗಳವರು

ಏನು ಕೋಲೂರು ಮಲ್ಲಪ್ಪನವರೇ ಮತ್ಯಾಕೆ ಬಂದೀರಿ? ಏನು ವಿಷಯ? ಬಿಡಿಸಿ ಹೇಳಿರಿ ಎಂದರು. ಸಾಹೆಬ್ರ ತಾವು ನನ್ನನ್ನು ಪೆರೋಲ್ (ಬೇಲ್) ಮೇಲೆ ಬಿಟ್ಟಿದ್ದೀರಿ. ಆದರೆ ನಮ್ಮ ಕಾರ್ಯಕರ್ತರು ನನ್ನನ್ನು ಪರಾರಿಯಾಗಲು ಒತ್ತಾಯಪಡಿಸುತ್ತಿದ್ದಾರೆ. ಆದರೆ ನಿಮಗೆ ಮೋಸ ಮಾಡಿದ ಹಾಗೆ ಆಗುತ್ತದೆ ಎಂದು ನಿಮ್ಮ ಹತ್ತಿರ ಬಂದಿದ್ದೇನೆ ಎಂದರು.

ಅವರ ಪ್ರಾಮಾಣಿಕ ಭಾವನೆ ಗೃಹಮಂತ್ರಿಯವರ ಶ್ಲಾಘನೆಗೆ ಒಳಗಾಯಿತು. ಅದಕ್ಕೆ ಅವರು ನನ್ನನ್ನು ಏನು ಕೇಳುತ್ತೀರಿ ಮಲ್ಲಪ್ಪನವರೇ, ನಿಮ್ಮಲ್ಲಿ ಆ ಶಕ್ತಿ ಇದೆ. ಆದರೆ ನಿಮ್ಮ ಹಿಂದೆ ಯಾವಾಗಲೂ ಸಿ.ಐ.ಡಿ. ಗಳು ಇದ್ದಾರೆ ನಿಮ್ಮ ಪ್ರತಿಯೊಂದು ಚಲನವಲನಗಳ ಮೇಲೆ ನಿಗಾ ಇಟ್ಟಿರುತ್ತಾರೆ. ಆದರೆ ನನ್ನದೇನು ಅಭ್ಯಂತರವಿಲ್ಲ. ನೀವು ಪರಾರಿಯಾಗಬಹುದು ಎಂದು ಹೇಳಿ ಇನ್ನೊಂದು ಮಾತನ್ನು ನುಡಿದರು. "ನಿಮ್ಮ ಶಕ್ತಿಯೇ ನಿಮಗೆ ರಕ್ಷೆಯಾಗಲಿ" ಎಂದು ಹೇಳಿ ನಿಮ್ಮನ್ನು ಬಿಟ್ಟು ಬಿಟ್ಟಿದ್ದೇನೆ. ಬೇಕಾದ್ದನ್ನು ಮಾಡಿರಿ ಎಂದು ಹೇಳಿ ಬೆನ್ನು ತಟ್ಟಿದರು.

ಅವರು ಪರಾರಿಯಾಗಲು ನಿರ್ಧಾರ ತೆಗೆದುಕೊಂಡು ಹೈದ್ರಾಬಾದ್‌ನಿಂದ ರಾತ್ರಿ ಒಂದು ಗಂಟೆಗೆ ಮಹಿಬೂಬ ನಗರಕ್ಕೆ ಬಂದು ರೈಲ್ವೆದಲ್ಲಿ ಪ್ರಯಾಣಮಾಡಿ ಧರ್ಮಾವರದಿಂದ ಬೇರೆ ದಾರಿಯಲ್ಲಿ ಗದುಗಿಗೆ ಹೋದರು. ಹೈದ್ರಾಬಾದ್‌ನಲ್ಲಿದ್ದಾಗ ಶರಣಗೌಡರು ಸಿಂದಗಿಯಿಂದ ಅವರಿಗೆ ಫೋನ್ ಮಾಡಿದರು. ಇಲ್ಲಿರುವ ಕಾರ್ಯಕರ್ತರಲ್ಲಿ ಆಂತರಿಕ ವೈಮನಸ್ಸು ಹೆಚ್ಚಾಗಿದೆ ನೀವು ಬಂದು ಅದನ್ನು ಸರಿಪಡಿಸಬೇಕು ಎಂದು ತಿಳಿಸಿದರು. ಅವರು ಹೈದ್ರಾಬಾದಿನಿಂದ ಬಂದ ಮೇಲೆ ಹಲವು ಮುಸ್ಲಿಂ ಮುಖಂಡರು ಅವರ ಬಳಿ ಬಂದು ನೋಡ್ರಿ ಸಾಹೇಬ್ರ ನಿಮ್ಮ ಕಡೆಯವರು ನಮಗೆ ತೊಂದರೆ ಕೊಡಲಿಕ್ಕೆ ಹತ್ತಿದ್ದಾರೆ ಎಂದು ಹೇಳಿದಾಗ ಅವರು ಹಾಗೆ ಆಗದ ಹಾಗೇ ನಾನು ನೋಡಿಕೊಳ್ಳುತ್ತೇನೆ. ಎಂದು ಹೇಳಿ ಕಳಿಸಿದರು. ಮರುದಿವಸ ಸಭೆ ಕರೆದು ಎಲ್ಲರಿಗೂ ತಾಕೀತು ಮಾಡಿದರು. ನಮ್ಮ ಹೋರಾಟವು ಶಾಂತ ರೀತಿಯಿಂದ ಕೂಡಿದ್ದಾಗಿರಬೇಕೇ ವಿನಃ ಯಾವುದೇ ವಿಚ್ಛಿದ್ರಕಾರಿ ಘಟನೆಗಳಿಗೆ ಅವಕಾಶ ನೀಡುವುದು ಆಗಿರಬಾರದು ಎಂದು ಸಭೆಯಲ್ಲಿ ಸೇರಿದ ಕಾರ್ಯಕರ್ತರಿಗೆ ಮನವಿ ಮಾಡಿದರು.

ಅಂದು ರಜಕಾರರ ಮಾತಿಗೆ ಬೆಲೆ ಕೊಟ್ಟು ನಿಜಾಮ್ ಸರ್ಕಾರ ಕೋಲೂರು ಮಲ್ಲಪ್ಪನವರನ್ನು ಜೀವಂತ ಅಥವಾ ಶವ ತಂದುಕೊಟ್ಟವರಿಗೆ ಹತ್ತು ಸಾವಿರ ಉಸ್ಮಾನಿಯ ಕರೆನ್ಸಿ ಕೊಡುವುದಾಗಿ ಘೋಷಿಸಿತು. ಮಲ್ಲಪ್ಪನವರು ಬಿಜಾಪುರದ ಡಾ|| ನಾಗೂರ್ ಮನೆಯಲ್ಲಿ ಸ್ವಲ್ಪ ದಿನ ಕಳೆದರು. ಇವರ ಜೊತೆ ಮಗದುಂ ಮೈನುದ್ದೀನ್, ಡಾ|| ರಾಜ್ ಬಹದ್ದೂರ್ ಗೌಡ, ರಮಿನಾರಾಯಣರೆಡ್ಡಿ ಮುಂತಾದವರು ಇದ್ದು ಮಲ್ಲಪ್ಪನವರ ನಾಯಕತ್ವದಲ್ಲಿ ಹೈದ್ರಬಾದ್ ವಿಮೋಚನಾ ಚಳುವಳಿಯನ್ನು ಒಂದು ಸವಾಲಾಗಿ ಪರಿಗಣಿಸಿದರು. ಸತ್ಯ, ಅಹಿಂಸೆ, ಶಾಂತಿಯ ಆರಾಧಕರಾಗಿದ್ದ ಅವರು ಅದೇ ದಾರಿಯಲ್ಲಿ ನಡೆದರು.

ಗಜೇಂದ್ರಗಡದಲ್ಲಿ ಕಾಂಗ್ರೆಸ್ಸಿನ ಸಶಸ್ತ್ರ ಶಿಬಿರದ ಕೇಂದ್ರವಿತ್ತು. ಮರುಡಿಯ ಭೀಮಪ್ಪ, ಜಿ.ಕೆ ರಾಜಪುರೋಹಿತ ಅವರು ಮುಖ್ಯಸ್ಥರಾಗಿದ್ದರು. ಇಂಥ ಅನೇಕ ಶಿಬಿರಗಳು ಶಾಂತಗೇರಿ, ಇಟಗಿ, ಮುಂಡರಗಿ, ಚಳ್ಳಕಪ್ಪೂರ ಇವುಗಳಲ್ಲಿ ಸ್ಥಾಪನೆಯಾಗಿ ಈ ಶಿಬಿರಗಳು ಅವರ ಮಾರ್ಗದರ್ಶನದಲ್ಲಿ ಮುಂದುವರೆದವು. ಶಿಬಿರದವರಿಗೆಲ್ಲ ಅವರು ಸ್ಫೂರ್ತಿದಾಯಕರಾಗಿದ್ದರು. ಈ ಶಿಬಿರಗಳು ರಜಾಕಾರರ ಮತ್ತು ಪೋಲಿಸರ ವಿರುದ್ಧ ಕಾರ್ಯಾಚರಣೆ ನಡೆಸಿದ್ದವು. ನಿರಾಶ್ರಿತರ ಯೋಗಕ್ಷೇಮವನ್ನು ಈ ಶಿಬಿರಗಳಲ್ಲಿ ನೋಡಿಕೊಳ್ಳಲಾಗುತ್ತಿತ್ತು. ಅವರು ಮೇಲ್ವಿಚಾರಣೆಗಾಗಿ ಗದಗ ಕೇಂದ್ರಕ್ಕೆ ಬಂದರು. ಅದು ಪ್ರಮುಖ ಕೇಂದ್ರವಾಗಿತ್ತು. ಅವರು ಗಡಿ ಭಾಗದಲ್ಲಿ ಸಹಾನುಭೂತಿ ಹೆಚ್ಚಿಸದರಲ್ಲದೆ ಧನ ಸಂಗ್ರಹ ಮಾಡಿ ಗದಗ ಕೇಂದ್ರಕ್ಕೆ ಅರ್ಪಿಸುತ್ತಿದ್ದರು.

ಮಲ್ಲಪ್ಪನವರ ಪ್ರಭಾವಕ್ಕೊಳಗಾದ ದಕ್ಷ ಹೋರಾಟಗಾರ ಸಗರನಾಡಿನ ಅಚ್ಚಪ್ಪಗೌಡ ಸುಬೇದಾರ ಎನ್ನುವರು ಗಡಿ ಶಿಬಿರಗಳಿಗೆ ಶಸ್ತ್ರಗಳನ್ನು ಸರಬರಾಜು ಮಾಡುತ್ತಿದ್ದರು. ಒಂದು ದಿನ ಅಚ್ಚಪ್ಪಗೌಡರು ಸಿಂದಗಿ ಕ್ಯಾಂಪ್‌ಗೆ ಬಾಂಬುಗಳನ್ನು ಒಯ್ಯುವಾಗ ನಿಜಾಮ ಪೋಲಿಸರ ಕೈಗೆ ಸಿಕ್ಕುಬಿದ್ದರು. ನಿಜಾಮ ಪೋಲಿಸರು ಅವರನ್ನು ಬಂಧಿಸಿದರು. ಆಗ ಪೋಲಿಸ್ ಇನ್ಸ್‌ಪೆಕ್ಟರರು ವಿಮೋಚನೆಯ ಪ್ರಮುಖ ಮೇಲ್ವಿಚಾರಕ ಮಲ್ಲಮ್ಮನವರಿಗೆ ಈ ವ್ಯಕ್ತಿ ನಿಮ್ಮ ಕಾರ್ಯಕರ್ತನೇ ಎಂದು ಕೇಳಿದರು. ಸುದ್ಧಿತಿಳಿದ ಅವರು ಹೌದು. ಅವರು ನಮ್ಮ ಕಾರ್ಯಕರ್ತರೆ, ಅವರನ್ನು ಬಿಟ್ಟ ಬಿಡಿ ಎಂದು ಹೇಳಲು ತಿಳಿಸಿದರಂತೆ. ಬಿಡುಗಡೆಯಾದ ಅಚ್ಚಪ್ಪಗೌಡರು ಮಲ್ಲಪ್ಪನವರ ಜೊತೆಯಲ್ಲಿ ಶಿಬಿರಗಳಲ್ಲಿ ಕೆಲಸ ಮಾಡತೊಡಗಿದರು. ಮಲ್ಲಪ್ಪನವರು, ದೇಸಾಯಿಯವರು, ಚಂದ್ರಕೀಯವರು ಭಾರತದಲ್ಲಿ ಹೈದ್ರಬಾದ್‌ನ್ನು ವಿಲೀನಗೊಳಿಸಬೇಕೆಂದು ನಿಜಾಮ ಆಳ್ವಿಕೆ ರದ್ದುಗೊಳಿಸಲು ಜನತೆಯಲ್ಲಿ ಮತ್ತು ವಿದ್ಯಾರ್ಥಿಗಳಲ್ಲಿ ಪ್ರಚೋದನೆ ತುಂಬಿದರು. ಇದರ ಪರಿಣಾಮವಾಗಿ ಕಲಬುರ್ಗಿಯಲ್ಲಿ ಬಹುತೇಕ ವಿದ್ಯಾರ್ಥಿಗಳೆಲ್ಲ ಚಳುವಳಿಗೆ ಧುಮುಕುವಂತಾಯಿತು.

1946ರಲ್ಲಿ ಹೈದ್ರಬಾದ ಜನತೆಯ ಪರಿಸ್ಥಿತಿ ಶೋಚನೀಯವಾಗಿತ್ತು. "ವಂದೇಮಾತರಂ" ಚಳುವಳಿಯಲ್ಲಿ ಭಾಗವಹಿಸಿದ ಹನುಮಸಾಗರದ ದಾಸಪ್ಪ ಎಂಬ ವಿದ್ಯಾರ್ಥಿಯು ಹಿಂಸೆಯಿಂದ ಸಾವನ್ನು ಅಪ್ಪಿದ. ಇದು ಅವರಿಗೆ ತೀವ್ರ ಆಘಾತವನ್ನುಂಟುಮಾಡಿತು. ಅವರು ಘೋಷಣೆಗಳನ್ನು ಕೂಗುತ್ತಾ ಒಕ್ಕೂಟ ಸೇರಿರಿ ಎಂಬುದರ ಮೂಲಕ ವಿದ್ಯಾರ್ಥಿ ಸಮುದಾಯಕ್ಕೆ ಹೋರಾಟಕ್ಕಿಳಿಯಲು ಹುರಿದುಂಬಿಸಿದರು. ಅವರ ನೇತೃತ್ವದಲ್ಲಿ ಕಾಲೇಜು ತೊರೆದು ಬಂದ ವಿದ್ಯಾರ್ಥಿಗಳು, ಅಪಾರ ಸಂಖ್ಯೆ ನಾಗರಿಕರು ಪ್ರತಿಭಟಿಸಿ ಯಾವುದೆ ಹೋರಾಟಕ್ಕೂ ಸಿದ್ಧರಾದರು.

ಸಹನೆ ಶಾಂತಿಯ ಪಿತಾಮಹನೆಂದೇ ಕರೆಯಬಹುದಾದಂತ ವ್ಯಕ್ತಿತ್ವ ಹೊಂದಿದ್ದ ಅವರು ಶಾಂತಿ ಸಹನೆಯೇ ನಮ್ಮ ಹೋರಾಟದ ಪ್ರಮುಖ ಗುರಿಯಾಗಲಿ ಎಂದು ಸೇರಿದ್ದ ವಿದ್ಯಾರ್ಥಿಗಳಿಗೆ, ನಾಗರಿಕರಿಗೆ ಮನವಿ ಮಾಡಿದರು. ಹಳ್ಳಿಗಳಲ್ಲಿ ಅವರ ಪ್ರಭಾವ ವಿಸ್ತರಿಸಿದ್ದರಿಂದ ಅಲ್ಲಿಯ ಜನತೆ ಹೋರಾಟಕ್ಕೆ ಅವರ ಮಾರ್ಗದರ್ಶನದಲ್ಲಿ ಸಿದ್ಧರಾಗಿದ್ದು ಯಾವುದೇ ಕಾರಣಕ್ಕೂ ಹಿಂದೆ ಮುಂದೆ ನೋಡುವ ಸ್ಥಿತಿಯಲ್ಲಿರಲಿಲ್ಲ.

ಸ್ವಾಮಿ ರಮಾನಂದ ತೀರ್ಥರು, ಮಲ್ಲಪ್ಪಾಜಿಯವರು, ದೇಸಾಯಿಯವರು, ಚಂದ್ರಕಿಯವರು ಮಾರ್ಗದರ್ಶಕರಾಗಿದ್ದು. ಇವರ ನಿರ್ದೇಶನದಲ್ಲಿ ದತ್ತಾತ್ರೇಯ ಅವರಾದಿ, ಅಣ್ಣಾರಾವ್ ಗಣಮುಖಿ, ನಾರಾಯಣ ಕಾನಿಯಾಳ, ರಾಜಾವೆಂಕಟಪ್ಪ ನಾಯಕ್, ಶರಣಗೌಡ ಇನಾಂದಾರ, ಸಗರನಾಡಿನ ಅಚ್ಚಪ್ಪಗೌಡ ಸುಬೇದಾರ, ಡಾ|| ಮೇಲು ಕೋಟೆ, ದಿಗಂಬರಾವ್ ಕಲ್ಬುರ್ಕರ್, ಆರ್. ವಿ ಬಿಡಪ್, ಶಿವಮೂರ್ತಿ ಸ್ವಾಮಿ, ಭೀಮಸೇನ್‌ರಾವ್ ಓಮಾರತ್, ಜಗದೇವಪ್ಪ ಹಾಲಭಾವಿ. ಮಲ್ಲಣ್ಣ ಅಂಬಿಗಾರ, ಹೋಳಿಶೇಷಗಿರಿರಾವ್. ಬಾಪುಗೌಡದರ್ಶನಾಪೂರ. ಹಾಗೂ ಅವರ ಸಹೋದರ ಮಾಣಿಕರಾಯ ಗೌಡ ದರ್ಶನಾಪೂರ ಮುಂತಾದವರು ಪ್ರತಿ ಸರ್ಕಾರವನ್ನು ಪೋಷಿಸಿದರು. ಅದೆಷ್ಟು ದಿನ ರಜಾಕಾರರಿಗೆ ನಿಜಾಮ ಸರಕಾರ ಬೆಂಬಲ ನೀಡುವದೋ ಆ ವರೆಗೆ ಸಹನೆಯಿಂದಲೇ ನಾವು ಹೋರಾಟವನ್ನು ಮುಂದುವರಿಸೋಣ ಎಂದು ಆಯಾ ಶಿಬಿರಗಳ ಮುಖಂಡರುಗಳಿಗೆ ಆದೇಶ ನೀಡುತ್ತಿದ್ದರಲ್ಲದೇ ಜೊತೆಗೆ ಮನವಿಯನ್ನು ಮಾಡುತ್ತಿದ್ದರು.

ಅಂದು ಸೋಲಾಪುರದ ಶಿಬಿರವನ್ನು ಮಲ್ಲಪ್ಪನವರ ಮಾರ್ಗದರ್ಶನದಲ್ಲಿ ನಡೆಸುತ್ತಿದ್ದರು. ಚಂದ್ರಶೇಖರ ಪಾಟೀಲರು ಆಗ ಅಲ್ಲಿದ್ದರು. ಅವರು ಮುಸ್ಲಿಂರೆಂದು ತಿಳಿದು ಶಿಬಿರದವರು ನಂಬಿರಲಿಲ್ಲ. ಅವರಾದಿಯವರು ಅಲ್ಲಿ ಕಾರ್ಯನಿರ್ವಹಿಸುತ್ತಿದ್ದರು. ಮೇಲ್ವಿಚಾರಣೆಯ ನಾಯಕರಲ್ಲಿಯೇ ಪ್ರಮುಖರಾದ ಮಲ್ಲಪ್ಪಾಜಿಯವರು, ದತ್ತಾತ್ರೇಯ ಅವರಾದಿ ಮತ್ತು ಚಂದ್ರಶೇಖರ ಪಾಟೀಲರ ಪರಿಚಯವನ್ನು ಶಿಬಿರದವರಿಗೆ ಮಾಡಿದರಲ್ಲದೆ ಇವರು ಶಿಬಿರದಲ್ಲಿ ಕೆಲಸ ಮಾಡುವಂತೆ ಮಾಡಿದರು.

ವಿಜಾಪುರದಲ್ಲಿ ನಿರಾಶ್ರಿತರ ಶಿಬಿರವನ್ನು ಅಣ್ಣಾರಾವ್ ಗಣಮುಖಿಯವರು ನೋಡಿಕೊಳ್ಳುತ್ತಿದ್ದರು. ಆ ಶಿಬಿರಗಳ ಮೇಲ್ವಿಚಾರಣೆಯನ್ನು, ಆ ಶಿಬಿರಗಳಿಗೆ ಬೇಕಾಗುವ ಎಲ್ಲಾ ತರಹದ ವ್ಯವಸ್ಥೆಯನ್ನು ಮಲ್ಲಪ್ಪಾಜಿಯವರು ನೋಡುತ್ತಿದ್ದರಲ್ಲದೆ, ಮಲ್ಲಪ್ಪನವರು ಹೋರಾಟವು ವಿಜಾಪೂರದಿಂದ ಸೋಲಾಪುರದವರೆಗೂ ವಿಸ್ತರಿಸಿತ್ತು. ಅವರಾದಿ ಮತ್ತು ಎಸ್. ಹಣಮಂತರಾವ್ ಅವರು "ನಾಗರಿಕ" ಎಂಬ ಸಾಪ್ತಾಹಿಕ ಪತ್ರಿಕೆಯನ್ನು ನಡೆಸುತ್ತಿದ್ದರು, ಮಲ್ಲಪ್ಪಾಜಿಯವರು ಆ ಪತ್ರಿಕೆಗೆ ಬೆಂಬಲಿಸಿ ಅದು ಬೆಳೆಯುವುದಕ್ಕೆ ಪ್ರೋತ್ಸಾಹ ನೀಡಿದರು. ಆ ಪತ್ರಿಕೆಯು ಅಂದಿನ ನೈಜ ಪರಿಸ್ಥಿತಿಯನ್ನು ವಿವರಿಸುವುದಕ್ಕಾಗಿ ಇತ್ತು.

1948ರಲ್ಲಿ ಸರ್ದಾರ ಪಟೇಲರ ನೇತೃತ್ವದಲ್ಲಿ ಪೋಲಿಸ್ ಕಾರ್ಯಾಚರಣೆಯಾಗಿ ನಿಜಾಮ ಶರಣಾಗತನಾದನು. ಮಲ್ಲಪ್ಪನವರಿಗೆ ಸಂತೋಷವೆನಿಸಿತು. ಏಕೆಂದರೆ ಅದು ಪ್ರಜಾಪ್ರಭುತ್ವಕ್ಕೆ ಸಿಕ್ಕ ಜಯವಾಗಿದ್ದಿತು. ಪೋಲಿಸ್ ಕಾರ್ಯಾಚರಣೆಯ ನಂತರ ಅವರು ಯಾದಗಿರಿಯಲ್ಲಿ ಒಂದು ಬಹಿರಂಗ ಸಭೆಯನ್ನು ಕರೆದಿದ್ದರು. ಅಪಾರ ಸಂಖ್ಯೆಯ ಕಾರ್ಯಕರ್ತರು ನೊಂದು ಬೆಂದು ಸೇಡಿನಿಂದ ಕುದಿಯ ತೊಡಗಿದ್ದರು. ಕೊಲೂರು ಮಲ್ಲಪ್ಪಾಜಿಯವರೆ ನಮಗೆ ತ್ರಾಸು ಕೊಟ್ಟ ವ್ಯಕ್ತಿಗಳ ಮೇಲೆ ಸೇಡು ತೀರಿಸಿಕೊಳ್ಳದೆ ಬಿಡಲಾರೆವು ಎಂದು ಘಂಟಾ ಘೋಷವಾಗಿ ಕೂಗತೊಡಗಿದರು. ವೇದಿಕೆಯಲ್ಲಿ ಉಪಸ್ಥಿತರಿದ್ದ ಅವರು ಎದ್ದು ನಿಂತು ನೀವು ಹೇಳುವುದನ್ನು ನಾನು ಇದುವರೆಗೂ ಕೇಳಿದ್ದೇನೆ.

ಈಗ ನಾನು ಹೇಳುವುದನ್ನು ಸ್ವಲ್ಪ ಲಕ್ಷ್ಯವಹಿಸಿ ಕೇಳಿರಿ ಎಂದು ಮಾತನ್ನು ಮುಂದುವರೆಸುತ್ತಾ, ನೋಡಿರಿ ಕಾರ್ಯಕರ್ತ ಬಂಧುಗಳೇ ಈಗ ನಮ್ಮ ಕೈಯಲ್ಲಿ ಸ್ವಾತಂತ್ರ್ಯ ಬಂದಿದೆ. ಅದನ್ನು ದುರುಪಯೋಗಪಡಿಸಿಕೊಳ್ಳುವುದು ಬೇಡ. ನಾವು ಜನಸಂಖ್ಯೆಯಲ್ಲಿ 100ರಲ್ಲಿ 80ರಷ್ಟು ಇದ್ದೇವೆ. ಮುಸ್ಲಿಂ ಬಂಧುಗಳು ಶೇಕಡಾ 15 ರಷ್ಟು ಇದ್ದಾರೆ. ಅವರ ಮೇಲೆ ಸೇಡನ್ನು ತೀರಿಸಿಕೊಳ್ಳುವುದು ಸರಿಯಾದ ಕಾರ್ಯವಾಗಲಾರದು. ಏಕೆಂದರೆ ಭಾರತಾಂಬೆಯ ಸೆರೆಯನ್ನು ಬಿಡಿಸಲು ಎಲ್ಲಾ ಧರ್ಮಿಯ ಸಹೋದರರು ಹೋರಾಟ ಮಾಡಿಲ್ಲವೆ? ಕೆಲವು ದುಷ್ಟಶಕ್ತಿಗಳು ದುಷ್ಟ ಕೆಲಸ ಮಾಡಿದ್ದಾರೆ ಎಂದ ಮೇಲೆ ನಾವು ಕೂಡ ಅದನ್ನು ತಿಳಿದು ಅಂತಹ ಕೆಲಸಕ್ಕಿಳಿಯುವದು ನೀಚತನವೆನಿಸುತ್ತದೆ.

ಈಗ ಹಾಗಾಗುವುದಕ್ಕೆ ನಾವು ಅವಕಾಶ ಮಾಡಿಕೊಡಬಾರದು. ಅವರ ತಪ್ಪನ್ನ ನಾವೇ ಮನ್ನಿಸಬೇಕು. ಏಕೆಂದರೆ ನಮ್ಮ ಸಹೋದರರಲ್ಲವೆ? ಒಬ್ಬ ಸಹೋದರ ತಪ್ಪು ಮಾಡಿದ್ದಾನೆ ಎಂದ ಮೇಲೆ ಇನ್ನೊಬ್ಬ ಸಹೋದರರಾದ ನಾವು ಕ್ಷಮಿಸಬೇಕು. ನೀವೆಲ್ಲಾ ಶಾಂತರಾಗಿ ಸಹನೆಯನ್ನು ತಂದುಕೊಳ್ಳಿ ಎಂದು ಹೇಳಿದರು.

ಆದರೆ ನೆರೆದ ಕಾರ್ಯಕರ್ತರು "ಕೊಲೂರುಜೀಯವರೇ, ಅವರು ನಮ್ಮ ಆಹಾರ ಧಾನ್ಯವೆಲ್ಲಾ ಕೊಳ್ಳೆ ಹೊಡೆದಿದ್ದಾರೆ. ಈಗ ನಾವು ಹೇಗೆ ಬದುಕುವುದು ನೀವು ಹೇಳಿ?" ಅಂದಾಗ ಅವರು ಸಮಾಧಾನ ತಂದುಕೊಳ್ಳಿ ನಿಮಗೆ ಆಹಾರ ಧಾನ್ಯದ ವ್ಯವಸ್ಥೆಯನ್ನು ಮಾಡುತ್ತೇನೆ. ಸರಕಾರಿ ಗೋದಾಮಿನಲ್ಲಿ 600 ಚೀಲ ಜೋಳವಿದೆ. ಅದನ್ನು ನಿಮಗೆ ವಿತರಿಸುತ್ತೇನೆ. ಸರ್ಕಾರಕ್ಕೆ ಅದರ ಖರ್ಚುಭರಿಸುವಂತಹ ವ್ಯವಸ್ಥೆ ಮಾಡುತ್ತೇನೆ ಎಂದು ಹೇಳಿದಾಗ ಅಹಿತಕರ ಘಟನೆಯನ್ನುಂಟು ಮಾಡಲು ಹೊರಟ ಕಾರ್ಯಕರ್ತರಿಗೆ ಅವರ ಮಾತುಗಳು ಅವುಗಳ ದಿಕ್ಕನ್ನೇ ಬದಲಿಸಿ, ಅವರಲ್ಲಿ ಉತ್ಸಾಹವನ್ನು ಮೂಡಿಸಿದವು. ಇದು ಅವರ ಘನ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ.

ಎಲ್ಲಾ ಕಡೆಗೆ ನೆರವು ನೀಡಲು ಮಲ್ಲಪ್ಪನವರು ಚಂಪ್ರಕಿಯವರ ನೇತೃತ್ವದಲ್ಲಿ ಜಿಲ್ಲಾ ಪರಿಹಾರ ಮತ್ತು ಪುನರ್ ವಸತಿ ಸಮಿತಿಯನ್ನು ಸ್ಥಾಪಿಸಿ ನೊಂದವರಿಗೆ ಮನೆ–ಮಾರು ಕಳೆದುಕೊಂಡವರಿಗೆ ನೆರವಾಗುವ ಕೆಲಸ ಮಾಡಿದರು. ಇವರ ಜೊತೆಯಲ್ಲಿ ದತ್ತಾತ್ರೇಯ ಅವರಾದಿ, ಅಣ್ಣಾರಾವ್ ಗಣಮುಖಿ, ಹಣಮಂತರಾವ್ ಕಕ್ಕೇರಿ, ಕಾನಿಹಾಳ್ ಮತ್ತು ದೇವಳಗಾಂವಕರ ಇತರರು ಈ ಸಮಿತಿಯಲ್ಲಿದ್ದರು.

ಅಂದು ಅಂದರೆ ಪೋಲಿಸ್ ಕಾರ್ಯಾಚರಣೆಯ ನಂತರ ಎಲ್ಲಾ ಕಡೆಗೆ ಅಹಿತಕರ ಘಟನೆಗಳು ಆಗದ ಹಾಗೆ ನೋಡಿಕೊಳ್ಳಲು ಅಂದಿನ ಗೃಹ ಮಂತ್ರಿಯವರಿಗೆ ಮಲ್ಲಪ್ಪನವರು ಮನವಿಮಾಡಿಕೊಂಡರು. ಶಾಂತಿ ಸಹನೆಯ ರುವಾರಿಯಾಗಿದ್ದ ಅವರು ಯಾದಗಿರಿಯಲ್ಲಿ ಒಬ್ಬ ಮುಸ್ಲಿಂ ಬಂಧುವಿಗೂ ತೊಂದರೆ ಉಂಟಾಗದಂತೆ ನೋಡಿಕೊಂಡರು. ಬೇರೆ ಕಡೆ ಕೆಲವಮಟ್ಟಿಗೆ ಅಹಿತಕರ ಘಟನೆಗಳು ಸಂಭವಿಸಿದವು. ಇದು ಅವರ ಹೃದಯವನ್ನು ಹಿಂಡಿದಂತಾಯಿತು. ಆದರೆ ಅವರು ಯಾದಗಿರಿಯಲ್ಲಿ ಇಂತಹದಕ್ಕೆ ಅವಕಾಶ ಮಾಡಿಕೊಟ್ಟಿರಲಿಲ್ಲ. ಇದು ಅವರ ಹೃದಯ ಶ್ರೀಮಂತಿಕೆಯನ್ನು ಹಾಗೂ ದೊಡ್ಡ ಗುಣವನ್ನು ಎತ್ತಿ ತೋರಿಸುತ್ತದೆ.

ಜ್ಞಾನಿಗಳಾದ ಬಳಿಕ ಪರಿಪೂರ್ಣ ಜಗತ್ತೆಂದರಿಯಬೇಕು,
ಜ್ಞಾನಿಗಳಾದ ಬಳಿಕ ಪಾಪ ವಾಸನೆ ತೊರೆದಿರಬೇಕು.
ಜ್ಞಾನಿಗಳಾದ ಬಳಿಕ ಅನ್ಯರ ನುಡಿಗೆ ಒಳಗಾಗಬಾರದು.
ಜ್ಞಾನಿಗಳಾದ ಬಳಿಕ ಅನ್ಯರ ನಿಂದೆಗೆ ಒಳಗಾಗಬಾರದು.
ಕಪಿಲ ಸಿದ್ದಮಲ್ಲಿಕಾರ್ಜುನಾ.

- ಸಿದ್ಧರಾಮೇಶ್ವರ

ವಚಿಸಿ ಅನುಭವಿಯಾಗದವ ಪಿಶಾಚಿಯಯ್ಯಾ;
ವಚಿಸಿ ಅನುಭವಿಯಾದವ ಪಂಡಿತನಯ್ಯಾ,
ವಿದ್ಯೆಯೆಂಬುದು ಅಭ್ಯಾಸಿಕನ ಕೈವಶ.
ಅವಿದ್ಯೆಯೆಂಬುದು ಸರ್ವರಲ್ಲಿ ವಶ.
ವಿದ್ಯಾವಿದ್ಯೆಯನರಿತು ಜಗದ್ವೇದ್ಯನಾಗಬಲ್ಲಡೆ
ಮಹಾಪಂಡಿತ ನೋಡಾ, ಕಪಿಲ ಸಿದ್ಧಮಲ್ಲಿಕಾರ್ಜುನಾ.

- ಸಿದ್ಧರಾಮೇಶ್ವರ

# ರಾಜಕಾರಣ ಮತ್ತು ರಚನಾತ್ಮಕ ಕಾರ್ಯ

ಅರವತ್ತು ವರ್ಷಗಳವರೆಗಿನ ಮಲ್ಲಪ್ಪನವರ ರಾಜಕೀಯ ಸೇವೆ ಅಗಾಧವಾದದ್ದು ರಾಜಕೀಯ ಬದುಕಿನುದ್ದಕ್ಕೂ ಒಮ್ಮೆಯೂ ಅವರು ತಮ್ಮ ಹೆಸರಿಗೆ ಕಳಂಕ ತಂದುಕೊಂಡಿಲ್ಲ. ಭಾರತ ಸ್ವಾತಂತ್ರ್ಯ ಮತ್ತು ಹೈದ್ರಾಬಾದ್ ವಿಮೋಚನೆಗಾಗಿ ಹೋರಾಡಿದ ಅವರು ಮುಂದೆ ಸ್ವಾತಂತ್ರ್ಯ ನಂತರ 1948 ರಲ್ಲಿ ರಾಜ್ಯಮಟ್ಟದ ನಾಯಕರ ಮತ್ತು ಕಾಂಗ್ರೆಸ್ ಕಾರ್ಯಕರ್ತರ ಒತ್ತಾಯದ ಮೇರೆಗೆ ಗುಲಬರ್ಗಾ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಕಾಂಗ್ರೆಸ್ ಪಕ್ಷವನ್ನು ಸಂಘಟಿಸಿ ಬೆಳೆಸಿದರು. ಇಷ್ಟೊತ್ತಿಗಾಗಲೇ ಮಲ್ಲಪ್ಪನವರು ತಮ್ಮ ವ್ಯಕ್ತಿತ್ವವನ್ನು ಗುರುತಿಸಿಕೊಂಡಿದ್ದರಿಂದಾಗಿ ಅಪಾರ ಜನತೆ ಅವರ ಅಭಿಮಾನಿಗಳಾಗಿದ್ದರು. ಅಂದು ರಾಷ್ಟ್ರರಾಜಕಾರಣದಲ್ಲಿ ಪ್ರಭಾವಿ ನೇತರರಾದ ಡಾ!! ರಾಜೇಂದ್ರಪ್ರಸಾದ್, ನೆಹರೂ, ಲಾಲಬಹಾದ್ದೂರ ಶಾಸ್ತ್ರಿ ಸರದಾರಪಟೇಲ, ವಿನೋಬಾಭಾವೆ ಇವರೊಂದಿಗೆ ಸಂಪರ್ಕ ಹೊಂದಿದ್ದರು.

## ಶಾಸಕರಾಗಿ ಸೇವೆ

1952 ರಲ್ಲಿ ಸುರಪುರದಲ್ಲಿ ಹಿಂದು ಮುಸ್ಲಿಂರ ನಡುವೆ ಸ್ಥಳದ ಸಂಬಂಧವಾಗಿ ವೈಮನಸ್ಸು ಉಂಟಾಗಿತ್ತು ಇದನ್ನು ಶ್ರೀ ಮಲ್ಲಪ್ಪನವರು ಕಾರ್ಯಕರ್ತರಿಂದ ತಿಳಿದುಕೊಂಡಿದ್ದರು. ಆ ಸಮಯದಲ್ಲಿ ಸುರಪುರದ ಮುಸ್ಲಿಂ ನಾಯಕರು ಮಲ್ಲಪ್ಪನವರನ್ನು ಭೇಟಿಯಾಗಿ ತಮ್ಮ ಸಮಸ್ಯೆಯನ್ನು ಬಗೆಹರಿಸಲು ವಿನಂತಿಸಿಕೊಂಡಿದ್ದರಿಂದ ಮಲ್ಲಪ್ಪನವರು ತಮ್ಮ ಕಾರ್ಯಕರ್ತರೊಂದಿಗೆ ಸುರಪುರಕ್ಕೆ ಆಗಮಿಸಿ ದೊರೆ ರಾಜಾ ವೆಂಕಪ್ಪ ನಾಯಕ್ ಬ್ಯಾರಿಸ್ಟರ್ ಅವರನ್ನು ಭೇಟಿಯಾಗಿ ಹಿಂದು ಮತ್ತು ಮುಸ್ಲಿಂರನ್ನು ಒಂದುಕಡೆ ಕೂಡಿಸಿ ಸಮಜಾಯಿಸಿ ತಿಳಿಸಿ, ಸ್ಥಳವಲ್ಲಿ ಸಮಪಾಲು ಮಾಡಿ ಎರಡು ಗುಂಪುಗಳನ್ನು ಸಮಾಧಾನ ಪಡಿಸಿಯಾದಗಿರಿಗೆ ವಾಪಾಸಾದರು.

ಮುಂದೆ ಅದೇ ವರ್ಷವೇ ಚುನಾವಣೆ ಘೋಷಣೆಯಾಗಿದ್ದರಿಂದ ಸುರಪುರದಲ್ಲಿ ಶಾಸಕರಾಗಲು ಅಲ್ಲಿಯವರಲ್ಲಿಯೇ ವೈಮನಸ್ಸುಗಳು ಉಂಟಾದವು ಸುರಪುರದ ಜನತೆ ಮಲ್ಲಪ್ಪನವರನ್ನು ತಮ್ಮ ಕ್ಷೇತ್ರದಿಂದ ಪ್ರತಿನಿಧಿಸಲು ಕೇಳಿಕೊಂಡರು. ಹೀಗಾಗಿ ಮಲ್ಲಪ್ಪನವರು ತಮ್ಮ ಯಾದಗಿರಿ ಕ್ಷೇತ್ರವನ್ನು ಸ್ನೇಹಿತ ಮತ್ತು ಸಹ ಹೋರಾಟಗಾರ ಚಂದ್ರಿಕಯವರಿಗೆ ಬಿಟ್ಟುಕೊಟ್ಟು ಸುರಪುರದಲ್ಲಿ ಚುನಾವಣಾ ಕಣಕ್ಕಿಳಿದರು. ಎಲ್ಲಾ ಜನರ ಸಹಕಾರದಿಂದ ಮಲ್ಲಪ್ಪನವರು ತಮ್ಮ ಎದುರಾಳಿಯನ್ನು ಸೋಲಿಸಿ ಆಯ್ಕೆಯಾಗಿ ಬಂದರು. ಪ್ರಥಮ ಬಾರಿಗೆ ಸುರಪುರ ಕ್ಷೇತ್ರದ ಶಾಸಕನಾದ ಶ್ರೇಯಸ್ಸು ಮಲ್ಲಪ್ಪನವರಿಗೆ ಸಲ್ಲುತ್ತದೆ ಸುರಪುರದ ಜನತೆಗೆ ಮೊದಲ ಪ್ರಜಾಪ್ರಭುತ್ವದ ದನಿಯಾಗಿ ಕಾಣಿಸಿಕೊಂಡರು. 1952 ರಿಂದ 1957 ರವರೆಗೆ ಸುರಪುರ ಕ್ಷೇತ್ರದ ತಮ್ಮ ಶಾಸಕತ್ವದ ಅವಧಿ ಮುಗಿಯುವವರೆಗೂ ಪ್ರಾಮಾಣಿಕ ಸೇವೆಯನ್ನು ಸುರಪುರ ಕ್ಷೇತ್ರಕ್ಕೆ ನೀಡಿದರಲ್ಲದೆ ಜನರ ಪ್ರೀತಿಗೆ ಪಾತ್ರರಾದರು.

## ಅಧ್ಯಕ್ಷರಾಗಿ ಸೇವೆ

ಹೈದ್ರಾಬಾದ ಪ್ರದೇಶ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸುವ ಅವಕಾಶ ಅವರಿಗೆ ದಕ್ಕಿತು. 1954 ಜುಲೈ 10 ರಂದು ಅಧ್ಯಕ್ಷ ಚುನಾವಣೆಗೆ ಶ್ರೀ ಮಲ್ಲಪ್ಪನವರು ಕಣಕ್ಕಿಳಿದರು ಅವರ ಎದುರಾಳಿಯಾಗಿ ಶ್ರೀದೇವಿಸಿಂಗ್ ಚವ್ಹಾಣ ನಿಂತಿದ್ದರು. 104 ಮತಗಳು ಮಲ್ಲಪ್ಪನವರ ಪಾಲಾದರೆ 71 ಮತಗಳು ಚವ್ಹಾಣರಿಗೆ ಲಭಿಸಿದ್ದವು. ಒಂದು ಮತ ಕುಲಗೆಟ್ಟಿತ್ತು. ಶ್ರೀರಂಗಾರೆಡ್ಡಿಯವರು ಮಲ್ಲಪ್ಪನವರ ಪ್ರಾಮಾಣಿಕ ಮನೋಭಾವನೆ ಧೈರ್ಯಶಾಲಿತನವನ್ನು ಹೊಗಳಿ ಅವರನ್ನು ಚುನಾಯಿಸಿದರು ಅವರ ಜೀವನದಲ್ಲಿ ಇದು ಮಹತ್ವದ ದಿನವಾಗಿತ್ತು. ಶ್ರೀ ರಂಗಾರೆಡ್ಡಿಯವರಿಂದ ಚಾರ್ಜ್ ತೆಗೆದುಕೊಂಡರು.

ಮಲ್ಲಪ್ಪನವರು ಬಿ. ರಾಮಕೃಷ್ಣರಾವ್, ರಂಗಾರೆಡ್ಡಿ, ದೇಸಾಯಿ, ಬಿಂದು ಇವರೆಲ್ಲರ ಜೊತೆ ಸಮಾಲೋಚನೆ ನಡೆಸಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯನ್ನು ಸ್ಥಾಪಿಸಿದರು. ಕೊಂಡಾಲಕ್ಷ್ಮಣ ವರ್ಕಿಂಗ ಕಮಿಟಿಯ ವಿಷಯದಲ್ಲಿ ಮಾತನಾಡಲಿಕ್ಕೆ ಅವರಿಗೆ ಭೇಟಿಯಾಗಿದ್ದರು. ಅವರನ್ನು ಚುನಾಯಿಸಿದ ನಂತರ ವಿರೂಪಾಕ್ಷಪ್ಪ, ಶ್ರೀ ಮೇಲುಕೋಟೆ, ನಾರಾಯಣಪ್ಪ, ಸಜ್ಜದಸಾಬ ಗುಲ್ಬರ್ಗಾ, ಬಹಳ ಜನ ಅವರಿಗೆ ಹೂ ಹಾರ ಹಾಕಿ ಔತಣ ಕೂಟಕ್ಕೆ ಮನೆಗೆ ಆಹ್ವಾನಿಸಿದರು. ಅನೇಕರು ಅವರಿಗೆ ಅಭಿನಂದನೆ ಸಂದೇಶ ಸಲ್ಲಿಸಿದರು. ನಿಜಲಿಂಗಪ್ಪ, ಕಂಠಿ ದುಬೆ, ವೈದ್ಯಾ ಇತರರು ಅಭಿನಂದನ ಪತ್ರ ಕಳಿಸಿದರು.

1954 ಜುಲೈ 17 ರಂದು ಗುಲಬರ್ಗಾಕ್ಕೆ ಪ್ರವಾಸಕ್ಕೆ ಹೋದರು 19 ರಂದು ಯಾದಗಿರಿ, 20 ಸುರಪುರ, ತೆಲಂಗಾಣ ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಕಾಂಗ್ರೆಸ್ ಬಲಪಡಿಸಿದರು. 20 ದಿನಗಳಲ್ಲಿ ವರದಿ ತಯಾರಿಸುವಂತೆ ಕಾರ್ಯಕರ್ತರಿಗೆ ಆದೇಶ ಮಾಡಿದರು. ಆ ಸಂದರ್ಭದಲ್ಲಿ ಎಂ.ಪಿ. ಯಾಗಿದ್ದ ಹರಿಶ್ಚಂದ್ರ ಹೆಡಕೂಡಾ ಇದ್ದು, ರೈತರು ಕಾರ್ಮಿಕರು ಯುವಕರು ಎಲ್ಲರೂ ಕೂಡಿ ಕಾಂಗ್ರೆಸ್ ಪಕ್ಷ ಬಲಪಡಿಸಬೇಕೆಂದು ಹೇಳಿದರು. ಇಷ್ಟೊತ್ತಿಗಾಗಲೇ ಯಾದಗಿರಿಯಲ್ಲಿ ಕಾಂಗ್ರೆಸ್ ಭವನ ಕಟ್ಟಿಸಬೇಕೆಂದು ಯೋಚಿಸಿ ಅವರು ಅದರ ನಿರ್ಮಾಣಕ್ಕೆ ಶ್ರಮಿಸಿದರು.

ಹೈದ್ರಾಬಾದ್‌ನಲ್ಲಿ ಕಾಂಗ್ರೆಸ್ ಕಾರ್ಯದರ್ಶಿ ಮಹಮ್ಮದ್ ಮೋಹಿಸ್ ಸಾಯಂಕಾಲ 9 ಗಂಟೆಗೆ ಕರೆದ ಸಭೆಯಲ್ಲಿ ಹಿಂದೂ ಮುಸ್ಲಿಂವರು ಕೂಡಿದ್ದರು. ದಿನ್-ಯಾರ್-ಜಂಗ್, ಹುಷ್-ಯಾರ-ಜಂಗ್, ಜೈನ್ ಯಾರ್ ಜಂಗ್, ದೋಸ್ತ ಮಹಮ್ಮದ್ ಖಾನ್, ಆರ್. ಅಯ್ಯಂಗಾರ ಎಡಾಜಿ, ಸುಭಾಷ್, ವಿರುಪಾಕ್ಷಪ್ಪ, ಶ್ರೀನಿವಾಸ, ಸಂಗಮ್ಮ, ಲಕ್ಷ್ಮೀಬಾಯಿ ಇತ್ಯಾದಿ ಕರ್ನಾಟಕದ ಏಕೀಕರಣದ ಬಗ್ಗೆ ಈ ಸಂದರ್ಭದಲ್ಲಿ ಪ್ರಸ್ತಾಪಿಸಿ ಜನರ ಅಭಿಪ್ರಾಯ ಏನೆಂಬುದನ್ನು ತಿಳಿದುಕೊಳ್ಳಬೇಕೆಂದು ವಿಚಾರ ಮಾಡಿದರು.

ಅದೇ ವರ್ಷ ಜುಲೈ 18 ರಂದು ಮಲ್ಲಪ್ಪನವರು ಗುಲಬರ್ಗಾ ಪ್ರವಾಸಕ್ಕೆ ಹೋದಾಗ ದರ್ಗಾ ಕಾರ್ಯಕ್ರಮ ಮುಗಿಸಿಕೊಂಡು ಐವಾನ್‌ಷಾಹಿಯಲ್ಲಿ ರಾತ್ರಿ ಇದ್ದು, ಕಾಂಗ್ರೆಸ್ಸಿನ ಆಫೀಸಿನ ಬಗ್ಗೆ ಅಲ್ಲದೆ ಮಹಂತಪ್ಪನವರ ಜೊತೆ ಮಾತನಾಡಿದರು. ಮರುದಿವಸ ಕಾಂಗ್ರೆಸ್ ಆಫೀಸ್‌ನಲ್ಲಿ ಸಾರ್ವಜನಿಕವಾಗಿ ಮಾತನಾಡಿದರು. ಎಲ್ಲರೂ ಕಾಂಗ್ರೆಸ್ ಪಕ್ಷಕ್ಕೆ ಐಕ್ಯತೆಗಾಗಿ ಶ್ರಮಿಸಬೇಕು, ನೀವೆಲ್ಲರು ನನಗೆ ಸಹಕರಿಸಿದರೆ ನಾನು ಕಾಂಗ್ರೆಸ್ ಪಕ್ಷಕ್ಕಾಗಿ ದುಡಿಯುತ್ತೇನೆ ಎಂದು ಈ ಸಂದರ್ಭದಲ್ಲಿ ಕಾರ್ಯಕರ್ತರಿಗೆ ಕರೆ ನೀಡಿದರು. ಅವರು ಗುಲಬರ್ಗಾದಲ್ಲಿ ಲಂಬಾಣಿ ವಿದ್ಯಾರ್ಥಿನಿಯರ ವಸತಿನಿಲಯ ಉದ್ಘಾಟಿಸಿದರು. ಹರಿಜನ ಬ್ಲಾಕ್ 3ನ್ನು ಉದ್ಘಾಟಿಸಿದರು. ರಾತ್ರಿ ಊಟವಾದ ನಂತರ ಕಾಂಗ್ರೆಸ್ ಕಾರ್ಯಕರ್ತರಾದ ಚಂದ್ರಶೇಖರ ಪಾಟೀಲ, ಮಹಾದೇವಪ್ಪ ರಾಂಪುರೆ, ಮಹಮ್ಮದ್ ಅಲಿ ಜೊತೆ ಚರ್ಚಿಸಿದರು.

ಮರುದಿವಸ 19 ರಂದು ಮಲ್ಲಪ್ಪನವರು ನಗರ ಕಾಂಗ್ರೆಸ್ ಅಧ್ಯಕ್ಷ ನೀಲಕಂಠ ಅವರ ಮನೆಯಲ್ಲಿ ಬೆಳಗಿನ ಫಲಹಾರ ಮುಗಿಸಿ ಯಾದಗಿರಿಗೆ ವಾಪಾಸಾಗುವಾಗ ಶಹಾಬಾದ ಮಾರ್ಗವಾಗಿ ಬರುವ ಸಂದರ್ಭದಲ್ಲಿ ಅಲ್ಲಿಯ ಜನರು ಅವರನ್ನು ಸ್ವಾಗತಿಸಿ, ಹೂವಿನ ಹಾರ ಹಾಕಲು ಸರದಿ ಪ್ರಕಾರ ನಿಂತಿದ್ದರು. ಸ್ಟೇಷನ್ ಮತ್ತು ನಗರದಲ್ಲಿ ಸಾವಿರಾರು ಜನರು ಸೇರಿ ಮೆರವಣಿಗೆ ಮಾಡಿದರು. ಯಾದಗಿರಿಯ ಶಾರದಾ ಚಿತ್ರಮಂದಿರದಲ್ಲಿ ಮಲ್ಲಪ್ಪನವರು ಕಾರ್ಯಕರ್ತರ ಸಭೆ ಕರೆದರು.

ಕರ್ನಾಟಕ ಏಕೀಕರಣ ವಿಷಯವಾಗಿ ಮಾತನಾಡಿದರು. ಮಲ್ಲಪ್ಪನವರಿಗೆ ಕಾಂಗ್ರೆಸ್ ಕಾರ್ಯಕರ್ತರು ಮತ್ತು ಕುರುಬರು ಎರಡು ಮನವಿ ಪತ್ರಗಳನ್ನು ನೀಡಿದರು. ಜುಲೈ 20 ರಂದು ಶ್ರೀ ಮಲ್ಲಪ್ಪನವರು ಸುರಪುರಕ್ಕೆ ಹೋಗುವಾಗ ಹತ್ತಿ ಗೂಡೂರಿನಲ್ಲಿ ಕಾಂಗ್ರೆಸ್ ಕಾರ್ಯಕರ್ತರು ಹಾರ ಹಾಕುವುದರ ಮೂಲಕ ಸ್ವಾಗತಿಸಿದರು. ವಿರುಪಾಕ್ಷಪ್ಪ ಅವರ ಜೊತೆಯಲ್ಲಿದ್ದರು. ರಂಗಪೇಟೆಯಲ್ಲಿ ಮೆರವಣಿಗೆಯಾಯಿತು. ಅಲ್ಲಿ ಅಪಾರ ಜನರು ನಿಂತಿದ್ದರು. ಸುರಪುರ ಚೌಕ್‌ನಲ್ಲಿ ಸಭೆ ನಡೆಯಿತು. ಮಧ್ಯಾಹ್ನ ಹೈದ್ರಾಬಾದ್‌ಗೆ ತೆರಳಿದರು. ದಾರಿಯಲ್ಲಿ ಯಾನಾಗುಂದಿಯ ಮಾತೆಮಾಣಿಕೇಶ್ವರಿ ಜೊತೆ ಮಾತನಾಡಿದರು. ರಾತ್ರಿ ಹನ್ನೊಂದು ಗಂಟೆಗೆ ಹೈದ್ರಾಬಾದ್ ತಲುಪಿದರು.

ಮುಂಜಾನೆ ಬ್ಯಾಕ್‌ವರ್ಡ್‌ಕ್ಲಾಸ್ ಬೋರ್ಡಿಂಗ್ ಉದ್ಘಾಟಿಸಿದರು. ರಾಜಸಾಬ ಎಂಬುವವನಿಗೆ ಹಾಸ್ಟೆಲ್ ಸಲುವಾಗಿ 50 ರೂ ಗೆ ಬಾಡಿಗೆ ಕೊಡುವಂತೆ ವ್ಯವಸ್ಥೆ ಮಾಡಿದರು. ಅದೇ ವರ್ಷವೇ ಶ್ರೀ ಮಲ್ಲಪ್ಪನವರು ಅಜ್ಮೀರಕ್ಕೆ ಪ್ರಯಾಣ ಬೆಳೆಸಿದರು ಅವರ ಜೊತೆ ಬಿಂದು. ದೇಸಾಯಿ, ವಿರುಪಾಕ್ಷಪ್ಪ, ಗಾಡೆಸಾಹೇಬ ಜಹಾಗಿರದಾರ, ಬಾಬಾಸಾಹೇಬ, ಸುಶೀಲಾ ದೇವಿ ಅವರ ಜೊತೆ ಇದ್ದರು. ಮುಂಬೈನಲ್ಲಿ ಹೈದ್ರಾಬಾದ ಹೌಸದಿಂದ ವಾಹನ ತರಿಸಿ ತಿರುಗಾಡಿದರು. ಜವಾಹರಲಾಲ್ ನೆಹರೂ ಅವರೂ ಎಲ್ಲಾ ಪ್ರದೇಶದ ಕಾಂಗ್ರೆಸ್ ಕಮಿಟಿಯ ಮೀಟಿಂಗ್ ಕರೆದಿದ್ದರು.

ಅದೇ ಸಂದರ್ಭದಲ್ಲಿ ಪಂಡಿತ ನೆಹರೂ ಅವರೊಂದಿಗೆ ಮಲ್ಲಪ್ಪನವರು ಪರಿಚಯವಾಯಿತು. ನೆಹರು ಅವರು ಮಲ್ಲಪ್ಪನವರಿಗೆ ಕಾಂಗ್ರೆಸ್ ಪಕ್ಷ ಬಲಪಡಿಸಲು ಹೇಳಿದರು. ಶ್ರೀ ಮೋಘಾ ಜನರಲ್ ಕಾರ್ಯದರ್ಶಿಯಾಗಿದ್ದರು. ಕೊಲೂರು ಮಲ್ಲಪ್ಪನವರೂ ಶ್ರೀ ಪದ್ಮಚಾರವರಿಗೆ ಭೇಟಿಯಾದರು ಶ್ರೀ ಪದ್ಮಚಾರವರು ಬಂಗಾಳದ ಮುಖ್ಯಮಂತ್ರಿ ಬಿ.ಸಿ.ರಾಯ್, ನಾಗಪುರದ ಮಂತ್ರಿ ರವಿಶಂಕರ ಶುಕ್ಲ. ಅವರ ಮಡದಿ ಪಂಡಿತ ಲಕ್ಷ್ಮೀ ದೇವಿ ಇವರನ್ನು ಮಲ್ಲಪ್ಪನವರಿಗೆ ಪರಿಚಯ ಮಾಡಿಸಿದರು. ಹಳ್ಳಿಕೇರಿ ಗುದ್ಲೆಪ್ಪ ಅವರೂ ಜೊತೆಯಲ್ಲಿ ಇದ್ದರು.

ನೆಹರೂ ಅಪ್ತ ಕಾರ್ಯದರ್ಶಿ ನಾಳೆ ಮೂರು ಗಂಟೆಗೆ ಮಲ್ಲಪ್ಪನವರಿಗ ನೆಹರೂ ಮಾತನಾಡಲು ಹೇಳಿದ್ದಾರೆಂದು ತಿಳಿಸಿದರು. ಮರುದಿನ ಶ್ರೀ ಮಲ್ಲಪ್ಪನವರು ಅಜಮೀರ್‌ದಲ್ಲಿ ವಸ್ತು ಪ್ರದರ್ಶನ ನೋಡಿ ಪೂರ್ತಿ ನಗರ ತಿರುಗಾಡಿ ಖಾಜಾ ಮೈನುದ್ದಿನ್ ಚಿಸ್ತಿ ಪುಷ್ಕರ ಟ್ಯಾಂಕ್ ನೋಡಿ ಅಲ್ಲಿ ಸಾಕಷ್ಟು ದೇವಾಲಗಳನ್ನು ಸಂದರ್ಶಿಸಿ ಮೂರು ಗಂಟೆಗೆ ಸಭೆಗೆ ಹೋದರು. ಅಲ್ಲಿ ವಿರೂಪಾಕ್ಷಪ್ಪನವರು ಮಾತನಾಡಿದರು. ಹಾಗೆಯೇ ನೆಹರೂರವರು ಮಲ್ಲಪ್ಪನವರನ್ನು ನೋಡುತ್ತಿದ್ದರು. ನೆಹರೂ ತಮ್ಮ ಭಾಷಣ ಮುಗಿದ ಹತ್ತು ನಿಮಿಷದಲ್ಲಿ ಮಲ್ಲಪ್ಪನವರನ್ನು ತಮ್ಮ ಹತ್ತಿರ ಕರೆಸಿಕೊಂಡರು. ಮಲ್ಲಪ್ಪನವರು ಡೈಯಾಸ್ ಮೇಲೆ ಹೋದಾಗ ನೆಹರು ಅವರ ಪಕ್ಕದಲ್ಲಿ ಕುಳಿತುಕೊಳ್ಳುವಂತೆ ಹೇಳಿದರು. ಮಲ್ಲಪ್ಪನವರೂ ನಮಸ್ಕರಿಸಿದಾಗ ನೆಹರೂರವರು ಎರಡು ಕೈ ಜೋಡಿಸಿ ನಮಸ್ಕಾರ ತೆಗೆದುಕೊಂಡರು ಅವರನ್ನು ಕುರಿತು ಪ್ರಶ್ನೆ ಕೇಳಿದರು. ನಿಮ್ಮ ಕಡೆ ಏನು ಸಮಾಚಾರ ಇದೆ? ಎಂದು ಕೇಳಿದಾಗ ಮಲ್ಲಪ್ಪನವರು ಈಗಾಗಲೇ ಅಲ್ಲಿ ಚುನಾವಣೆಯಾಗಿದೆ ನಮ್ಮನ್ನು ಅಧ್ಯಕ್ಷರನ್ನಾಗಿ ಚುನಾಯಿಸಿದ್ದಾರೆ ಎಲ್ಲಾ ಸರಿಯಾಗಿದೆ ಎಂದರು.

ನೆಹರೂ ಸ್ವಾಮೀಜಿ ಏನು ಮಾಡುತ್ತಿದ್ದಾರೆ ಎಂಬಾಗ ಭೂದಾನ ಕೆಲಸ ಮಾಡ್ತಾರಂತೆ ಎಂದು ಹೇಳಿದರು ನಿಮ್ಮೆದುರಿಗೆ ಯಾರು ನಿಂತಿದ್ದರು ಎಂದು ಮಲ್ಲಪ್ಪನವರನ್ನು ಕೇಳಿದರು ಶ್ರೀ ದೇವೀಸಿಂಗ್ ಚವ್ಹಾಣ ಎಂದರು ಶ್ರೀ ರಾಮಕೃಷ್ಣ ರಾವ್, ರಂಗಾರೆಡ್ಡಿ, ಎಂ.ಕೆಂಡಿ, ಸತ್ಯನಾರಾಯಣರಾವ್ ನನಗೆ ಬೆಂಬಲಿಸಿದರು. ನಾನು ಆಯ್ಕೆಯಾದೆ. ತಾವು ನನಗೆ ಮಾರ್ಗದರ್ಶನ ನೀಡಿದರೆ ಕಾಂಗ್ರೆಸ್ ಪಕ್ಷಕ್ಕಾಗಿ ದುಡಿಯುತ್ತೇನೆ ಎಂದು ಹೇಳಿದಾಗ ನೆಹರೂ ಅವರು ಹೀಗೆ ಹೇಳಿದರು ಮಲ್ಲಪ್ಪನವರಲ್ಲಿ ಕಾಂಗ್ರೆಸ್ ಪಕ್ಷವನ್ನು ಕಟ್ಟಿ ಬೆಳೆಸುವ ಲಕ್ಷಣಗಳಿವೆ. ನನ್ನ ಮಾರ್ಗದರ್ಶನ ಇದ್ದೇ ಇರುತ್ತದೆ ಎಂದು ಬೆನ್ನು ತಟ್ಟಿದರು. ಮಲ್ಲಪ್ಪನವರು ನಮಸ್ಕರಿಸಿ ವಾಪಾಸಾದರು. ಅಜ್ ಮೀರದಿಂದ ಬರುವಾಗ ಮೌಂಟ್ ಅಬು ನೋಡಿಕೊಂಡು ಬಂದರು. ಯಶವಂತರಾವ್ ಚವ್ಹಾಣ, ದೇಸಾಯಿ, ಬಿಂದು ಜೊತೆ ಕಾಂಗ್ರೆಸ್ ಪಕ್ಷ ಬಲಪಡಿಸುವ ಬಗ್ಗೆ ಚರ್ಚಿಸಿದರು.

1954 ಆಗಸ್ಟ್ 14 ರಂದು ಮಲ್ಲಪ್ಪನವರು ನೆಹರು ಜೊತೆ ಮಾತನಾಡಲು ದೆಹಲಿಗೆ ಹೋದರು ವಿದೇಶಿ ವ್ಯವಹಾರ ಕಛೇರಿಗೆ ಹೋದಾಗ ನೆಹರೂರವರು ಆಪ್ತ ಕಾರ್ಯದರ್ಶಿ ನೆಹರೂ ಅವರನ್ನು ಭೇಟಿಯಾಗಲು ಕಳಿಸಿದರು. ಅಷ್ಟರಲ್ಲಿ ಸೋಶಿಯಾಲಿಸ್ಟ್ ನಾಯಕ ಅಶೋಕ

ಮೆಹತಾ ಅಲ್ಲಿಗೆ ಬಂದಿದ್ದರು. ನೆಹರೂ ಮಲ್ಲಪ್ಪನವರಿಗೆ ಹೇಳಿದರು. ನೀವು ಅಪ್ಪಣೆ ಕೊಟ್ಟರೆ ಅವರನ್ನು ಕಳಿಸುತ್ತೇನೆ ಎಂದಾಗ ಮಲ್ಲಪ್ಪನವರು ಅವಶ್ಯವಾಗಿ ಮಾತನಾಡಿರಿ ಎಂದರು ಹತ್ತು ನಿಮಿಷ ಕಳೆದ ನಂತರ ನೆಹರೂರವರು ಮೆಹತಾರವರನ್ನ ಬೀಳ್ಕೊಟ್ಟು ಏನು ಮಲ್ಲಪ್ಪನವರೆ ಕಾಂಗ್ರೆಸ್ ಕೆಲಸ ಹೇಗೆ ನಡೆದಿದೆ? ಎಂದು ಕೇಳಿದರು. ಸರಿಯಾಗಿ ನಡೆದಿದೆ ನೀವು ಹಿಂದೆ ಹೇಳಿದಿರಲ್ಲಾ ಕಾಗದ ಪತ್ರಗಳನ್ನು ಕಳಿಸಲು ಅವುಗಳನ್ನು ಬಲವಂತರಾವ್ ಮೆಹತಾ ಅವರಿಗೆ ಕೊಟ್ಟಿದ್ದೇನೆ. ನಿಮಗೆ ಭೇಟಿಯಾಗಿ ಹೋಗೋಣಾಂತ ಬಂದಿದ್ದೇನೆ.

ಹೈದ್ರಾಬಾದ್ ಕಾಂಗ್ರೆಸ್ ಕಡೆ ಹೆಚ್ಚು ಒಲವು ಇರಲಿ ಭಿನ್ನಮತ ಬಹಳ ಹೆಚ್ಚಾಗಿದೆ ಎಂದಾಗ ನೀವು ಕಾಂಗ್ರೆಸ್ ಪಕ್ಷಕ್ಕೆ ದುಡಿಯಿರಿ ನಿಮಗೆ ಸಹಾಯ ಮಾಡುತ್ತೇನೆ ಎಂದ ಅವರು ಜೇಮುತೂಲಿಮುಸ್ಲಿಂ ಪಕ್ಷ ನಿಮಗೆ ಸಹಾಯ ಮಾಡುತ್ತದೆ. ಅವರ ಕಡೆಯಿಂದ ಸಹಾಯ ತಗೊಳ್ಳಿರಿ ಎಂದು ಹೇಳಿದರು. ಮುಸ್ಲಿಂರಿಗೆ ನಿಮ್ಮ ವಿಶ್ವಾಸದಲ್ಲಿ ತೆಗೆದುಕೊಳ್ಳಿರಿ ಎಂದು ಹೇಳಿದರು. ಕೆಲವರು ಅವರ ಮೇಲೆ ಅತ್ಯಾಚಾರ ಮಾಡುತ್ತಿದ್ದಾರೆ ಹಾಗೆ ಆಗದಂತೆ ನೋಡಿಕೊಳ್ಳಿರಿ ಉದಾ: ದಹಲಿಯಲ್ಲಿ ದರ್ಗಾ ಒಡೆದು ಹಾಕಿದರು ಇದೇ ಥರ ಹೈದ್ರಾಬಾದ ಪೋಲಿಸ್ ಆಕ್ಷನ್ ಕಾಲದಲ್ಲಿ ಕೊಲೆ ಮಾಡಲಾಯಿತು. ಅಲಿಘಡ್, ರಾಜಸ್ಥಾನದಲ್ಲಿ ಇಂಥ ಘಟನೆ ನಡೆದಿವೆ ಇರಲಿ ಅವರನ್ನು ವಿಶ್ವಾಸಕ್ಕೆ ತಗೊಳ್ಳಿರಿ ಎಂದರು ಈ ಎಲ್ಲಾ ಮಾತನಾಡಿ ಮಲ್ಲಪ್ಪನವರು ವಾಪಾಸ್ ಬರುವಾಗ ಅವರ ಗೆಳೆಯ ಆರ್.ಜಿ. ದುಬೆ ಬಿಜಾಪುರದವರಿದ್ದು ಪಾರ್ಲಿಮೆಂಟ್‌ನಲ್ಲಿ ಕಾರ್ಯದರ್ಶಿಯಾಗಿದ್ದರು. ನೆಹರೂ ಅವರೊಂದಿಗೆ ಮಲ್ಲಪ್ಪನವರು ಮಾತನಾಡಿದ ವಿಷಯ ತಿಳಿಸಿದರು. ದುಬೆ ಅವರಿಗೆ ಬಹಳ ಆನಂದವಾಯಿತು.

ಆಗಸ್ಟ್ 15 ರಂದು ಕೆಂಪು ಕೋಟೆಯ ಮೇಲೆ ನೆಹರೂ ಧ್ವಜಾ ಹಾರಿಸಿದರು ಮಲ್ಲಪ್ಪನವರು ನೋಡಿ ಸಂತೋಷಪಟ್ಟರು. ಗೃಹಮಂತ್ರಿ ಬಂದು ಲೋಕೋಪಯೋಗಿ ಮೇಲುಕೋಟೆ ಕೂಡಾ ಮಲ್ಲಪ್ಪನವರ ಜೊತೆಯಲ್ಲಿದ್ದರು ಆಗಸ್ಟ್ 16 ರಂದು ಶ್ರೀ ಮಲ್ಲಪ್ಪನವರು ವಿಮಾನದಲ್ಲಿ ಹೈದ್ರಾಬಾದ್‌ಗೆ ವಾಪಾಸಾದರು. ಅದೇ ದಿವಸ ಪೇಪರ್ ಅಂತಾಗ ನಿಜಾಮಬಾದಿನಲ್ಲಿ ಕೋಮು ಜಗಳವಾಗಿತ್ತು. ಮನೆಗಳು ಲೂಟಿ ಮಾಡಿ ಬೆಂಕಿ ಹಚ್ಚಿದರು. ಕಾರಣ ನೋಡಿದಾಗ ಗಾಂಧೀಜಿಯ ಮೂರ್ತಿಯ ಮೇಲೆ ಪಾಕಿಸ್ತಾನ ಧ್ವಜ ಹಾರಿಸಿದ್ದರು. ಮಲ್ಲಪ್ಪನವರು ಅಲ್ಲಿಗೆ ಹೋಗುವುದಕ್ಕಿಂತ ಮೊದಲೇ ಕಾರ್ಯದರ್ಶಿ ಹೋಗಿ ಒಂದು ಲಕ್ಷ ಹಾನಿಯಾಗಿದೆ ಎಂದು ಹೇಳಿದರು. ಮಲ್ಲಪ್ಪನವರು ಗೃಹಮಂತ್ರಿಯ ಜೊತೆ ಮಾತನಾಡಿ ಕೋಮುವಾದಿ ಜಗಳ ತಡೆಗಟ್ಟಬೇಕು ಪೋಲಿಸರನ್ನು ತಕ್ಷಣ ಕಳಿಸಬೇಕು ಇಂಥ ಘಟನೆ ಮರುಕಳಿಸದಂತೆ ನೋಡಿಕೊಳ್ಳಬೇಕು ಇದಕ್ಕೆ ಕಾರಣರಾದವರಿಗೆ ಶಿಕ್ಷೆ ಕೊಡಬೇಕೆಂದು ಸರಕಾರಕ್ಕೆ ಪತ್ರ ಬರೆದರು. ಮತ್ತೆ ಮಲ್ಲಪ್ಪನವರು ದೆಹಲಿಗೆ ಹೋಗಿ ನೆಹರು ಅಬ್ದುಲ್ ಕಲಾಮ್ ಆಜಾದ್, ರಫಿ ಅಹ್ಮದ್, ಕಿದ್ವಾಯಿ, ಗೋವಿಂದ, ವಲ್ಲಭಪಂತ್, ಜಗಜೀವನರಾಮ್, ಮುರಾರ್ಜಿದೇಸಾಯಿ, ಲಾಲಬಹಾದ್ದೂರ ಶಾಸ್ತ್ರಿ ಅವರನ್ನು ಭೇಟಿಯಾದರು.ಆ ಸಭೆಯಲ್ಲಿ ಹೈದ್ರಾಬಾದ್ ಮತ್ತು ಉತ್ತರ ಪ್ರದೇಶದಲ್ಲಿ ನಡೆದ ಕೋಮುವಾದದ

ಬಗ್ಗೆ ಚರ್ಚೆಯಾಗಿ ಇದನ್ನು ಹೇಗೆ ನಿಯಂತ್ರಿಸಬೇಕು ಎಂಬುದರ ಬಗ್ಗೆ ನಿರ್ಣಯ ತೆಗೆದುಕೊಳ್ಳಲಾಯಿತು ಮೌಲಾನಾ ಅಬ್ದುಲ್ ಕಲಾಮ್ ಆಜಾದ್, ಜಗಜೀವನರಾಮ್ ರಾಜೇಂದ್ರಬಾಬು ಇವರಿಗೆ ಭೇಟಿಯಾದರು ಅವರು ಸಂತೋಷದಿಂದ ಮಾತನಾಡಿದರು ಹೈದ್ರಾಬಾದ್ ವಿಷಯದ ಬಗ್ಗೆ ಕೇಳಿದರು. ಮಲ್ಲಪ್ಪನವರು ಉತ್ತರಿಸಿದರು.

## ಶಾಸಕನಾಗಿ ಮರು ಆಯ್ಕೆ

ಮುಂದೆ 1957 ರಲ್ಲಿ ಚುನಾವಣೆ ಘೋಷಣೆಯಾದ್ದರಿಂದ ಮಲ್ಲಪ್ಪನವರು ಸೇಡಂ ಜನತೆಯ ಒತ್ತಾಯದ ಮೇರೆಗೆ ಆ ಕ್ಷೇತ್ರವನ್ನು ಪ್ರತಿನಿಧಿಸಿ ಆಯ್ಕೆಯಾದರು ತಮ್ಮ ಶಾಸಕತ್ವದ ಅವಧಿಯಲ್ಲಿ ಸೇಡಂ ಕ್ಷೇತ್ರಕ್ಕೆ ತಮ್ಮಿಂದಾದಷ್ಟು ಕೆಲಸಗಳನ್ನು ಮಾಡಿ ಜನರ ಮನದಲ್ಲಿ ಉಳಿದರು. ಸೇಡಂ ಶಾಸಕನಾದ ಮೇಲೆ ಅವರಿಗೆ ಧಾರ್ಮಿಕ ಕ್ಷೇತ್ರದ ಕಡೆಗೆ ಹೆಚ್ಚು ಒಲವು ನೀಡಲು ಪ್ರೇರಣೆ ಯಾಯಿತೆಂದೇ ಹೇಳಬಹುದು ಏಕೆಂದರೆ ಸೇಡಂ ಮತ್ತು ಯಾದಗಿರಿಯ ಮಧ್ಯದಲ್ಲಿ ಯಾನಗುಂದಿ ಇದ್ದು. ಇಲ್ಲಿ ಮಾತೆ ಮಾಣಿಕೇಶ್ವರಿ ದೇವಿ ದರ್ಶನ ಪಡೆಯಲು ಸಹಾಯಕವಾಯಿತು. ಮತ್ತೆ ಮುಂದೆ ಚುನಾವಣೆ ಬಂದಾಗ ಗುರುಮಿಟ್ ಕಲ್ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ಪ್ರಚಾರವೇ ಮಾಡಲಿಲ್ಲ. ಪ್ರಚಾರ ಮಾಡದ್ದರಿಂದ ಅವರು ಸೋಲುಂಡರು.

ಶಾಸಕತ್ವದ ಅವಧಿಯಲ್ಲಿ ಮಲ್ಲಪ್ಪನವರು ಜನಪರ ಸೇವೆಯನ್ನು ಸಲ್ಲಿಸಿ ತಮ್ಮ ವ್ಯಕ್ತಿತ್ವದಿಂದ ಅಂದಿನ ಪ್ರಧಾನ ಮಂತ್ರಿ ಜವಾಹರಲಾಲ ನೆಹರೂ ಅವರನ್ನು ಆಕರ್ಷಿಸಿದ್ದರು ನೆಹರೂ ಮಲ್ಲಪ್ಪನವರನ್ನು ತಮ್ಮಲ್ಲಿಗೆ ಕರೆಸಿಕೊಂಡು ನಾಮಕರಣ ಎಂ.ಪಿ. ಯಾಗಲು ಕೇಳಿದರಲ್ಲದೆ ಕೇಂದ್ರ ಸಚಿವ ಸಂಪುಟದಲ್ಲಿ ಮಂತ್ರಿಯಾಗಲು ಸೂಚಿಸಿದರು ಅಷ್ಟೇ ವಿನಯದಿಂದ ಅಧಿಕಾರ ದಾಹದ ಆಸೆ ಇಲ್ಲದ ಅವರು ಹೀಗಾಗಲೇ ಗಾಂಧಿಜಿಯವರ ತತ್ವಕ್ಕೆ ಮಾರು ಹೋಗಿದ್ದರು ಅವರು ನಡೆದ ದಾರಿಯಲ್ಲಿ ತಮ್ಮ ನಡೆಯನ್ನು ಅನುಕರಿಸಿ ಸಚಿವರಾಗಲು ನಿರಾಕರಿಸಿದರು.

ಆದರೆ ಮಲ್ಲಪ್ಪನವರು ನೆಹರೂರವರ ವರ್ಕಿಂಗ್ ಕಮಿಟಿಯ ಸದಸ್ಯರಾಗಿ ಸೇವೆ ಸಲ್ಲಿಸಿದರು ಅವರಿಗೆ ನೆಹರೂರವರೊಂದಿಗೆ ಎಷ್ಟು ಉತ್ತಮವಾದ ಬಾಂಧವ್ಯ ಇತ್ತೆಂದರೆ ಕೆಲವೊಂದು ಸಂದರ್ಭದಲ್ಲಿ ನೆಹರೂ ಮತ್ತುಮಲ್ಲಪ್ಪನವರು ಊಟ ಮಾಡುವಾಗ ಇಂದಿರಾಗಾಂಧಿ ಊಟ ಬಡಿಸುತ್ತಿದ್ದರಂತೆ ಹೀಗೆ ಆತ್ಮೀಯ ಸಂಬಂಧವಿತ್ತು ಮುಂದೆ ಲಾಲಬಹಾದ್ದೂರ ಶಾಸ್ತ್ರಿ ಪ್ರಧಾನಿಯಾದಾಗ ಅವರು ಅವರೊಂದಿಗೂ ಉತ್ತಮ ಸಂಬಂಧವನ್ನು ಹೊಂದಿದ್ದರು.

# ರಾಜ್ಯಸಭಾ ಸದಸ್ಯರಾಗಿ ನೇಮಕ

ಇಂದಿರಾಗಾಂಧಿ ಪ್ರಧಾನಮಂತ್ರಿಯಾದಾಗ ಮಲ್ಲಪ್ಪನವರನ್ನು ಪ್ರೀತಿಯಿಂದ ಕಾಣುತ್ತಿದ್ದರು. ಅವರಲ್ಲಿ ಒಂದು ತರಹದ ಪೂಜ್ಯ ಮನೋಭಾವ ಇತ್ತು. ಇಂದಿರಾಗಾಂಧಿಯವರು ತಮ್ಮ ಆಡಳಿತಾವಧಿಯಲ್ಲಿ ಮಲ್ಲಪ್ಪನವರ ಮನವೊಲಿಸಿ ರಾಜ್ಯಸಭಾ ಸದಸ್ಯರಾಗಿ ನೇಮಕ ಮಾಡಿದರು. ಮಲ್ಲಪ್ಪನವರು ಸಂಸದರಾಗಿ ಮತ್ತು ವರ್ಕಿಂಗ್ ಕಮಿಟಿಯ ಸದಸ್ಯರಾಗಿ ಪ್ರಾಮಾಣಿಕ ಸೇವೆ ಸಲ್ಲಿಸಿದರು. ಅವರ ನಿಸ್ವಾರ್ಥ ಬದುಕನ್ನು ಅರ್ಥಮಾಡಿಕೊಂಡಿದ್ದ ಶ್ರೀಮತಿ ಇಂದಿರಾಗಾಂಧಿಯವರು ಮಲ್ಲಪ್ಪನವರನ್ನು ತಮ್ಮ ಸಚಿವ ಸಂಪುಟದಲ್ಲಿ ಸಚಿವರಾಗಲು ಅಥವಾ ಕರ್ನಾಟಕದ ಮುಖ್ಯ ಮಂತ್ರಿಯಾಗಲು, ರಾಜ್ಯಪಾಲರಾಗಲು ಕೇಳಿಕೊಂಡಿದ್ದರು.

ಆದರೆ ಮಲ್ಲಪ್ಪನವರ ದಾರಿ ಬೇರೆಯೇ ಆಗಿತ್ತು ಗಾಂಧಿಜಿಯವರ ತತ್ವಗಳು ಅವರಲ್ಲಿ ಮನೆಮಾಡಿಕೊಂಡಿದ್ದವು ಹೀಗಾಗಿ ಅವರು ಸಚಿವರಾಗಲು, ಇತರ ಹುದ್ದೆಯನ್ನು ಹೊಂದಲು ನಿರಾಕರಿಸಿದರು. ಹಿಂದುಳಿದವರನ್ನು ಮುಂದೆ ತರುವುದು ಮಲ್ಲಪ್ಪನವರ ಗುರಿಯಾಗಿತ್ತು. ತಾನು ಮುಂದೆ ಬರುವುದು ಮುಖ್ಯವಲ್ಲ ಹಿಂದಿದ್ದವರನ್ನು ಮುಂದೆ ತರುವುದೇ ಮುಖ್ಯ ಎಂಬ ಸಿದ್ಧಾಂತಕ್ಕೆ ಕಟಿಬದ್ಧರಾದ ಶ್ರೀ ಮಲ್ಲಪ್ಪನವರು ಡಿ. ದೇವರಾಜ ಅರಸರನ್ನು ಕರ್ನಾಟಕದ ಮುಖ್ಯಮಂತ್ರಿಯನ್ನಾಗಿ ಮಾಡುವಲ್ಲಿ ಯಶಸ್ವಿಯಾದರು.

ಪ್ರಥಮ ಬಾರಿಗೆ ದೇವರಾಜು ಅರಸು ಮುಖ್ಯ ಮಂತ್ರಿಯಾದಾಗ ಕುರುಬರ ಸಮಾಜದವರು ಅಭಿನಂದನಾ ಸಮಾರಂಭವನ್ನು ಇಬ್ಬರಿಗೆ ವುಡ್‌ಲ್ಯಾಂಡ್ಸ್ ಹೋಟೆಲ್‌ನಲ್ಲಿ ಏರ್ಪಡಿಸಿದ್ದರು. ಆಗ ದೇವರಾಜ ಅರಸು ಮಲ್ಲಪ್ಪನವರನ್ನು ಬಹಿರಂಗವಾಗಿ ನನ್ನ ರಾಜಕೀಯಗುರು ಎಂದು ಘೋಷಿಸಿಕೊಂಡಿದ್ದನ್ನು ಇಲ್ಲಿ ನೆನಪಿಸಬಹುದು. ಮುಖ್ಯ ಉದ್ದೇಶವೇನೆಂದರೆ ಶ್ರೀ ದೇವರಾಜ ಅರಸರು ಕೆಳವರ್ಗದಿಂದ ಬಂದವರಾಗಿದ್ದದ್ದು ಶ್ರೀ ಮಲ್ಲಪ್ಪಾಜಿಯವರು ಸ್ವಾತಂತ್ರ್ಯ ಸಂಗ್ರಾಮ ಕಾಲದಿಂದಲೂ ಹಿಂದುಳಿದ ವರ್ಗ, ಅಲ್ಪ ಸಂಖ್ಯಾತ ಮತ್ತು ನಿಮ್ನ ವರ್ಗಗಳ ಹಿತರಕ್ಷಣೆಗೆ ಎಲ್ಲಾ ಪ್ರತಿಕೂಲ ಪರಿಸ್ಥಿತಿಯಲ್ಲೂ ಕಾಂಗ್ರೆಸ್ಸಿನೊಳಗೆ ಹೋರಾಡುತ್ತ ಬಂದವರು ಕರ್ನಾಟಕದ ಕಾಂಗ್ರೆಸ್ ರಾಜಕೀಯದಲ್ಲಿ ಬಲಿಷ್ಟ ಕೋಮುಗಳ ವಾರಸು ಆಸ್ತಿಯ ಸ್ವರೂಪ ಪಡೆದಿದ್ದಂಥ ಏಕೀಕರಣದ ಆರಂಭದಲ್ಲಿ ಮತ್ತು ಆ ಮುಂಚೆ ಈ ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಒಂದು ವ್ಯವಸ್ಥಿತ ಸಂಘಟನೆಯಾಗಲಿ, ಚಳುವಳಿಯಾಗಲಿ, ಅಷ್ಟೇ ಏಕೆ? ಈ ವರ್ಗಗಳಿಗೆ ಧ್ವನಿ ಕೂಡಾ ಆ ಸನ್ನಿವೇಶದಲ್ಲಿ ದಲಿತ, ಹಿಂದುಳಿದ, ಅಲ್ಪಸಂಖ್ಯಾತ, ನಿಮ್ನವರ್ಗಗಳ ರಣಕಹಳೆ ಮೊಳಗುತ್ತ ಬಂದ ಈ ವರ್ಗಗಳಿಗೆ ಇದ್ದ ಏಕಮೇವ ಹಿರಿಯ ನಾಯಕರೆಂದರೆ ಶ್ರೀ ಕೊಲ್ಲೂರು ಮಲ್ಲಪ್ಪನವರು.

ಇಂದು ರಾಜ್ಯದಲ್ಲಿ ಮಾತ್ರವಲ್ಲ ರಾಷ್ಟ್ರದ ಉದ್ದಗಲಕ್ಕೂ ಹಿಂದುಳಿದ ಅಲ್ಪ ಸಂಖ್ಯಾತ ಮತ್ತು ದಲಿತ ವರ್ಗಗಳಿಗೆ ಒಂದು ಪ್ರತಿಬಿಂಬವಿದೆ; ಧ್ವನಿ ಇದೆ ಅದು ಸಾಕಷ್ಟು ಪ್ರಭಾವಶಾಲಿಯಾಗಿಯೂ ಇದೆ. ಇಂಥ ಸನ್ನಿವೇಶದಲ್ಲಿ ಮಲ್ಲಪ್ಪಾಜಿಯವರಂಥ ಅನುಭವಿಕ ಹಾಗೂ ಚಿಂತಕ ರಾಜಕಾರಣಿಗಳ ಮಾರ್ಗದರ್ಶನ ಈ ವರ್ಗಗಳಲ್ಲಿ ಕಾಂಗ್ರೆಸ್ ಪಕ್ಷದ ಸೈದ್ಧಾಂತಿಕ ಗೆಲುವು ಕಟ್ಟಿಕೊಳ್ಳುವುದಕ್ಕೆ ತುಂಬಾ ಸಹಕಾರಿಯಾಗಿದೆ ಇಂದಲ್ಲ ನಾಳೆ ಭಾರತ ಎರಡರಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳಬೇಕಾಗುತ್ತದೆ ಅದು ಗಾಂಧೀಜಿ ಬೋಧಿಸಿರುವ, ನೆಹರೂ ಆಶಿಸಿದ್ದ ರಕ್ತ ರಹಿತ ಸಾಮಾಜಿಕ ಕ್ರಾಂತಿ ಇಲ್ಲವೇ ಮಾರ್ಕ್ಸ್ ನಿರ್ದೇಶಿಸಿರುವ ರಕ್ತ ಸಿಕ್ತ ಸಶಸ್ತ್ರ ಕ್ರಾಂತಿ.

ಭಾರತದಂಥ ಬಡವರ ಸಂಖ್ಯೆ ಪ್ರಧಾನವಾಗಿರುವ ಬೃಹತ್ ರಾಷ್ಟ್ರವನ್ನು ಜಾತಿಧರ್ಮಗಳ ಮುಷ್ಟಿನಲ್ಲಿ ಅನವರತ ಅದುಮಿಟ್ಟು ಅವರ ಚೇತನವನ್ನು ಮುರುಟಿ ಹಾಕುವುದು ಎಷ್ಟು ಮಾತ್ರಕ್ಕೂ ಯಶಸ್ವಿಯಾಗದ ಸಾಹಸ ಎಂಬುದು ಸ್ಪಷ್ಟವಾಗಿ ಅರಿತುಕೊಳ್ಳುವುದು ಅವಶ್ಯವಿದೆ.

ಮಲ್ಲಪ್ಪನವರ ರಾಜಕೀಯ ನಿಷ್ಠೆ ಪ್ರಾಮಾಣಿಕತೆ ಎಷ್ಟಿತ್ತೆಂದರೆ ಅದು ಹೇಳಲು ಅಸಾಧ್ಯವಾಗಿತ್ತು. ತಾವು ಚುನಾವಣೆಗೆ ನಿಂತಾಗಲು ಪ್ರಚಾರ ಮಾಡಲಿಲ್ಲ ಏಕೆಂದರೆ ಅವರ ನಿಲುವೇ ಬೇರೆಯಾಗಿತ್ತು ನಾವು ಜನರಿಗೆ ಬೇಕಾಗಿದ್ದರೆ ಜನರೇ ನಮ್ಮನ್ನು ಆರಿಸುತ್ತಾರೆ. ಎಂಬುದು ಅವರ ನಿಲುವು ತಮ್ಮ ಸಹೋದರ ಈಶ್ವರ ಚಂದ್ರ ಕೊಲೂರುರವರು ಚುನಾವಣೆಗೆ ಸ್ಪರ್ಧಿಸಿದಾಗ ಟಿಕೇಟ್ ಕೊಡಲು ನಿರಾಕರಿಸಿದ ಅವರು ಚುನಾವಣೆ ಪ್ರಚಾರವಂತೂ ಮಾಡಲಿಲ್ಲ. ಅದ್ಹೇಗೊ ಅಣ್ಣನವರ ಹೆಸರಿನ ಪ್ರಭಾವದಿಂದ ಈಶ್ವರಪ್ಪನವರು ಟಿಕೇಟ್ ಪಡೆದು ಕಣಕ್ಕಿಳಿದರು. ಪ್ರಚಾರ ಮಾಡಿದ್ದರೆ ಆಯ್ಕೆಯಾಗುತ್ತಿದ್ದರೋ ಏನೋ?

ಅವರ ಹಿರಿಯ ಮಗ ರಾಜಶೇಖರ ವಕೀಲರಾಗಿದ್ದು ಎಂ.ಪಿ. ಟಿಕೇಟ್‌ಗಾಗಿ ಮಲ್ಲಪ್ಪನರನವರನ್ನು ಒತ್ತಾಯಪಡಿಸಿದರು. ಆದರೆ ಅವರು ಕಠೋರವಾಗಿ ನಿರಾಕರಿಸಿದರು. ಆದರೆ ಅವರ ಮಗ ರಾಜಶೇಖರ ತನ್ನ ಪ್ರೀತಿ ವಿಶ್ವಾಸ ಪ್ರಾಮಾಣಿಕತೆ ತೋರಿಸಿ ಟಿಕೇಟ್ ಪಡೆದುಕೊಂಡು ಕಣಕ್ಕಿಳಿದು ಒಂದು ಸಲ ಎಂ.ಪಿ. ಯಾಗಿ ಆಯ್ಕೆಯಾಗಿ ದೆಹಲಿಯನ್ನು ಪ್ರತಿನಿಧಿಸಿದರು. ತಂದೆ ಮಗ ಎಂ.ಪಿ. ಯಾದ ಸನ್ನಿವೇಶ ಹೈದ್ರಾಬಾದ್ ಕರ್ನಾಟಕದ ಚರಿತ್ರೆಯಲ್ಲಿಯೇ ಪ್ರಥಮ ವೆಂದೇ ಹೇಳಬಹುದು.

ಮಲ್ಲಪ್ಪನವರು ಎಷ್ಟು ನ್ಯಾಯ ನಿಷ್ಠುರಾಗಿದ್ದರೆಂದರೆ ಅದರ ಸಂಬಂಧಿಯೊಬ್ಬರು ಸರಕಾರಿ ಇಲಾಖೆಯಲ್ಲಿದ್ದು ಆರೋಪದ ಮೇಲೆ ಡಿಸ್‌ಮಿಸ್ ಆಗಿ ಸಂಬಂಧಿಕರು ಸೇವೆ ಸಲ್ಲಿಸಲು ಅವಕಾಶ ಮಾಡಿಕೊಡಲು ಕೇಳಿಕೊಂಡಾಗ ಇದು ಆಗದ ಕೆಲಸ, ತಪ್ಪು ಏಕೆ ಮಾಡಬೇಕು? ನೀವು ಹೇಳುವುದೇ ಸರಿ. ಆದರೆ ಮೋಹಕ್ಕೊಳಗಾಗಿ ಅವಕಾಶ ಕಲ್ಪಿಸಿ ಕೊಟ್ಟರೆ ಈ ನಾಡಿನಲ್ಲಿ ಅದೆಷ್ಟು ಜನ ಸಹೋದರರ ಮಕ್ಕಳು ಇರಬಹುದು? ಅವರಿಗೆ ಯಾರು ಮಾಡಿಸಬೇಕು ಎಂದು ಕಟುವಾಗಿ ನಿರಾಕರಿಸಿದರು.

ಇದು ಮಲ್ಲಪ್ಪನವರ ಅಪ್ಪಟ ಗಾಂಧೀವಾದಕ್ಕೆ ಹಿಡಿದ ಕೈಗನ್ನಡಿಯಾಗಿದೆ ಆದರೆ ಮಲ್ಲಪ್ಪನವರ ಸಂಬಂಧಿಯೆಂದು ತಿಳಿದ ಮೇಲಾಧಿಕಾರಿಗಳೇ ಅವಕಾಶ ಒದಗಿಸಿಕೊಟ್ಟರು. ಇಂಥಾ ನಿಷ್ಠಾವಂತ ರಾಜಕಾರಣಿ ನಮ್ಮ ಮಧ್ಯೆ ಜೀವಂತವಾಗಿದ್ದಾರೆಂದರೆ ನಂಬಲು ಸಾಧ್ಯವೇ? ನಂಬಲೇಬೇಕಾಗಿದೆ! ಮಲ್ಲಪ್ಪನವರನ್ನು ನೋಡಿ, ತಮ್ಮ ಕುಟುಂಬಕ್ಕಾಗಿ ಏನೂ ಮಾಡಿಕೊಂಡಿಲ್ಲ. ಕುಟುಂಬ ವರ್ಗ ದೊಡ್ಡದಾಗಿದ್ದು ಸಾಮಾನ್ಯ ಕುಟುಂಬಗಳಂತೆ ಇಂದಿಗೂ ಜೀವಿಸುತ್ತಿದ್ದಾರೆ. ಅವರ ಮೊಮ್ಮಕ್ಕಳು ಸ್ವಂತ ಪರಿಶ್ರಮ ಪಟ್ಟು ಉನ್ನತ ಶಿಕ್ಷಣ ಪಡೆದಿದ್ದಾರೆ ಅವರ ಪರಿಶ್ರಮವೇ ಅವರನ್ನು ಈ ಮಟ್ಟಕ್ಕೆ ತಂದಿದೆ ಎನ್ನಬಹುದು.

ಮಲ್ಲಪ್ಪನವರ ವಿಚಾರದಲ್ಲಿ ವ್ಯಕ್ತಿಗಳು ಅಧಿಕಾರ ಹುಡುಕಿಕೊಂಡು ಹೋದರೆ ಪ್ರಯೋಜನವಿಲ್ಲ ಅಧಿಕಾರ ನಮ್ಮನ್ನು ಹುಡುಕಿಕೊಂಡೇ ಬರಬೇಕು. ಆದರಿಂದ ಜನರ ಸೇವೆ ಪ್ರಾಮಾಣಿಕವಾಗಿ ಮಾಡಬೇಕು ನಮ್ಮ ಸೇವೆಯನ್ನು ಮಾಡಿಕೊಂಡರೆ ಆ ಶಿವನು ನಮ್ಮನ್ನು ಮೆಚ್ಚಿಕೊಂಡಾರ ಎನ್ನುವುದು ಮಲ್ಲಪ್ಪನವರ ನಿಲುವು ಶ್ರೀ ಮಲ್ಲಪ್ಪನವರು ತಮ್ಮ ಸುದೀರ್ಘವಾದ ರಾಜಕೀಯ ದಿನಮಾನಗಳಲ್ಲಿ ಸನಿಷ್ಠವಾಗಿ ಏನು ಮಾಡಿಕೊಳ್ಳಬೇಕೋ ಅದನ್ನು ಮಾಡಿಕೊಂಡಿಲ್ಲ. ಜನರ ಸಲುವಾಗಿ ತಮ್ಮ ಆಡಳಿತಾವಧಿಯಲ್ಲಿ ಸಾವಿರಾರು ಮನೆಗಳನ್ನು ಕಟ್ಟಿಸಿದ್ದಾರೆ ನಾನು ಅವರನ್ನು ಪ್ರಶ್ನಿಸಿದೆ ನಿಮಗೆ ಏನು ಮಾಡಿಕೊಂಡಿದ್ದೀರಿ? ನಮಗೇನು ಬೇಕಪ್ಪಾ ಜಗತ್ತೇ ನನ್ನ ಮನೆ ಇಲ್ಲಿಯ ಜನರೇ ನನ್ನ ಸಹೋದರರು ಮತ್ತು ಮಕ್ಕಳು ಎಂದ ಮಲ್ಲಪ್ಪನವರ ನುಡಿ ಗಾಂಧೀಜಿಯವರ ಸಮಾಜವಾದ ತತ್ವಕ್ಕೆ ಕನ್ನಡಿ ಹಿಡಿದಂತೆ

ರಾಜಕೀಯ ಕ್ಷೇತ್ರದಲ್ಲಿ ಇತ್ತೀಚೆಗೆ ಸೇವಾ ಮನೋಭಾವನೆ ಮಾಯವಾಗಿ ಅಧಿಕಾರ ಮತ್ತು ಹಣ ಗಳಿಕೆಗಾಗಿ ರಾಜಕೀಯ ರಂಗ ಪ್ರವೇಶಿಸುವುದಕ್ಕಾಗಿ ಅವರು ತೀವ್ರ ವಿಷಾದ ವ್ಯಕ್ತಪಡಿಸಿದ್ದಾರೆ. 1971 ರಲ್ಲಿ ತರೀಕೆರೆ ತಾಲೂಕು ಆಡಳಿತ ಕಾಂಗ್ರೆಸ್ ಪಕ್ಷವು ಪುರಭವನದ ಮುಂಭಾಗದಲ್ಲಿ ಏರ್ಪಡಿಸಿದ್ದ ಬಹಿರಂಗ ಸಭೆಯನ್ನು ಉದ್ದೇಶಿಸಿ ಮಾತನಾಡುತ್ತಿದ್ದ ಅವರು ಪ್ರಜಾಪ್ರಭುತ್ವದ ಬೆಳವಣಿಗೆಗೆ ಎರಡೇ ರಾಜಕೀಯ ಪಕ್ಷಗಳಿರಬೇಕು ಎಂದು ಹೇಳಿದರಲ್ಲದೆ ಜಾತಿಯ ಭಾವನೆಯನ್ನು ದೂರವಿಟ್ಟು ಪ್ರಾಮಾಣಿಕತೆ ಮತ್ತು ನಿಷ್ಠೆಯಿಂದ ಸೇವೆ ಸಲ್ಲಿಸುವವರಿಗೆ ಆದ್ಯತೆ ಕೊಡಬೇಕೆಂದು ನುಡಿದರು.

ದೇಶದ ಇಂದಿನ ಗಂಭೀರ ಪರಿಸ್ಥಿತಿಯ ಕುರಿತು ವ್ಯಾಕುಲಗೊಂಡಿದ್ದರು. ಪಂಜಾಬ, ಅಸ್ಸಾಂ,ಕಾಶ್ಮೀರದಂಥ ಗಡಿರಾಜ್ಯಗಳಲ್ಲಿ ತಲೆದೋರಿರುವ ಶಾಂತಿ ರಾಷ್ಟ್ರದ ಭದ್ರತೆ ಅಖಂಡತ್ವ ಹಾಗೂ ಭಾವೈಕ್ಯತಾ ದೃಷ್ಟಿಯಿಂದ ಆರೋಗ್ಯಕರವಾದುದಲ್ಲವೆಂದು ಈ ರಾಷ್ಟ್ರೀಯ ಹಿರಿಯ ನಾಯಕರ ವಿವೇಚನೆಯಾಗಿದೆ ಅಲ್ಲದೆ ಕಾಂಗ್ರೆಸ್ ಪಕ್ಷದ ವಿದ್ಯಮಾನಗಳು ತೃಪ್ತಿಕರವಾಗಿಲ್ಲದಿರುವುದು ಅವರ ಇನ್ನೊಂದು ಆತಂಕ ಪಕ್ಷದಲ್ಲಿ ಸೇವಾ ದೃಷ್ಟಿ ರಾಷ್ಟ್ರೀಯಮನೋಭಾವ ಪಕ್ಷದ ತತ್ವಕಾರ್ಯಕ್ರಮಗಳಲ್ಲಿ ನಂಬಿಕೆ ಹೊಂದಿರುವವರ ಸಂಖ್ಯೆ ಹೇಳಿಕೊಳ್ಳುವ ಸ್ಥಿತಿಯಲ್ಲಿ ಇಲ್ಲದಿರುವುದು

ಅಧಿಕಾರ ಲಾಲಸೆಯೇ ಪರಮಗುರಿಯಾಗಿರುವ ಸೋಗಲಾಡಿಗಳ ಸಂಖ್ಯೆ ಹೆಚ್ಚಾಗುತ್ತಿರುವುದು ಪಕ್ಷದ ಭವಿತವ್ಯ ಬೆಳಗಲು ತೊಡಕಾಗಿ ನಿಲ್ಲಬಹುದೆಂಬ ಆತಂಕ ಅವರನ್ನು ಭಾದಿಸುತ್ತಲಿದೆ ಈಗ ಮಲ್ಲಪ್ಪಾಜಿಯವರು ಪಕ್ಷಗಳು ಸೇವಾನಿಷ್ಟವಾಗಿ ರೂಪಿಸಲು ಇಂದಿನ ಪರಿಸ್ಥಿತಿಯಲ್ಲಿ ಭವ್ಯ ಸರಕಾರದ ಆವಶ್ಯಕತೆ ಎಂದಿಗಿಂತಲೂ ಹೆಚ್ಚಾಗಿರುವುದರಿಂದ ಶ್ರೀಮತಿ ಇಂದಿರಾಗಾಂಧಿಯವರ ನಾಯಕತ್ವವನ್ನು ಬಲಪಡಿಸಲು ಕಾರ್ಯತತ್ಪರರಾಗಿರುವುದು ಅವಶ್ಯಕವಿದೆ ಎಂದು ನುಡಿದರು.

ಅಷ್ಟೇನು ವಿದ್ಯಾವಂತರಿರದಿದ್ದರೂ ಮಲ್ಲಪ್ಪನವರು ಅನುಭವದಿಂದ ಅಪಾರವಾಗಿ ಕಲಿತಿದ್ದರು. ಮಾತಿನ ಮಧ್ಯ ಇಂಗ್ಲಿಷ್ ಬಳಸುವುದು ಅವರ ರೂಢಿ ಕನ್ನಡ,ಹಿಂದಿ,ತೆಲಗು, ಉರ್ದು,ಮರಾಠಿ ಭಾಷೆಗಳು ಹೆಚ್ಚು ಬಳಕೆಯಾಗುತ್ತಿರುವುದರಿಂದ ಎಲ್ಲರೊಂದಿಗೂ ಸಲೀಸಾದ ಒಡನಾಟ ಮಲ್ಲಪ್ಪನವರದು.

ಭಾರತೀಯ ಸ್ವಾತಂತ್ರ್ಯ ಹೋರಾಟಗಾರರ ಉದ್ದೇಶ ಕೇವಲ ಸ್ವಾತಂತ್ರ್ಯಗಳಿಸು ವುದಲ್ಲದೆ,ಅನೇಕ ಯೋಜನೆಗಳನ್ನು ಆಕಾಂಕ್ಷೆಗಳನ್ನು ಹೊಂದಿದ್ದರು. ಸ್ವಾತಂತ್ರ್ಯ ಗಳಿಸುವುದು ಕೇವಲ ರಾಜಕೀಯ ಗುರಿಯಾಗದೆ ಭಾರತದ ಸರ್ವಾಂಗೀಣ ಅಭಿವೃದ್ಧಿಗಾಗಿ ಸಾಮಾಜಿಕ ಸಾಂಸ್ಕೃತಿಕ ಅಭಿವೃದ್ಧಿಗಾಗಿಯೂ ಸಹ ಅವಶ್ಯಕವಾಗಿತ್ತು ಈ ಸಮಸ್ಯೆಗಳ ಬಗ್ಗೆ ಯೋಚಿಸದೆ ಅನೇಕ ಭಾರತೀಯ ಹೋರಾಟಗಾರರು ಸ್ವಾತಂತ್ರ್ಯದ ನಂತರ ಸ್ವಾರ್ಥಕ್ಕಾಗಿ ಅಧಿಕಾರದ ಲಾಲಸೆ ಹೊಂದಿ ಹೋದರು ಆದರೆ ಕೆಲವು ಸ್ವಾತಂತ್ರ್ಯ ಹೋರಾಟಗಾರರು ಗಾಂಧೀಜಿಯವರ ತತ್ವದ ಸ್ಥಾಪನೆಗಾಗಿ ಹೋರಾಟ ನಡೆಸಿದರು ಅವರಲ್ಲಿ ಕೊಲೂರು ಮಲ್ಲಪ್ಪನವರು ಪ್ರಮುಖರು.

## ಖಾದಿ ಉಣ್ಣೆ ಕೈಗಾರಿಕೆಗಳು

ಗಾಂಧೀಜಿಯವರು ಖಾದಿ ಮತ್ತು ಉಣ್ಣೆ ಕೈಗಾರಿಕೆಗಳಿಗೆ ಪ್ರಾಮುಖ್ಯತೆಯನ್ನು ನೀಡಿದ್ದರು ಈ ಕಾರ್ಯಕ್ರಮಗಳು ಮಾನವನ ಆರ್ಥಿಕ ಸುಧಾರಣೆಗೆ ಕಾರಣವಾದವು ಈ ಯೋಜನೆಗಳು ಹಳ್ಳಿಯ ಜನರನ್ನು ಬಹುವಾಗಿ ಆಕರ್ಷಿಸಿದವು ಗಾಂಧೀಜಿಯವರನ್ನು ಭೇಟಿಯಾದ ನಂತರ ಮಲ್ಲಪ್ಪನವರು ಖಾದಿಯ ರಚನಾತ್ಮಕ ಕಾರ್ಯದಲ್ಲಿ ತೊಡಗಿದರು. ಅಂದು ಮಲ್ಲಪ್ಪನವರು ಸ್ವಯಂ ಸೇವಾ ಸಂಘದ ಹೈದ್ರಾಬಾದ್ ವಿಭಾಗದ ಸದಸ್ಯರಾಗಿ ಖಾದಿ ಪ್ರಚಾರವನ್ನು ಮಾಡಿದರು. 1938 ರಲ್ಲಿಯೇ ಖಾದಿ ಮತ್ತು ಉಣ್ಣೆಯ ಏಜೆಂಟ್ ಆಗಿ ಕಾರ್ಯ ನಿರ್ವಹಿಸಿದರು.

ಅವರು ಖಾದಿ ಮತ್ತು ಉಣ್ಣೆಯ ಮಹತ್ವವನ್ನು ಜನರಿಗೆ ತಿಳಿಸಲು ಹಳ್ಳಿ ಹಳ್ಳಿಗೂ ಸಂಚರಿಸಿದರು. ಅವರ ಸ್ವಾತಂತ್ರ್ಯ ಹೋರಾಟದ ಸಮಯದಲ್ಲಂತೂ ಗ್ರಾಮ ಗ್ರಾಮಗಳಿಗೆ ತೆರಳಿ ಪ್ರಚಾರ ಮಾಡಿದರು. ಮಹಾರಾಷ್ಟ್ರ, ಕರ್ನಾಟಕ ಹಾಗೂ ಆಂಧ್ರಪ್ರದೇಶ ಇತ್ಯಾದಿ ರಾಜ್ಯಗಳಿಗೆ ಸಾಕಷ್ಟು ಸಲ ಭೇಟಿಯಿತ್ತರು. ಅವರು ಚರಕ ಸಂಘಗಳನ್ನು ಸ್ಥಾಪಿಸಿ ಜನರನ್ನು

ಆಕರ್ಷಿಸಿದರು. ಈ ಸಂಘಗಳು ಕೇವಲ ಜನರ ಜೀವನಾಧಾರವಾಗಿರದೆ ಸ್ವಾತಂತ್ರ್ಯ ಚಳುವಳಿಗೆ ಅವಶ್ಯಕವಾದ ಚಟುವಟಿಕೆಗಳ ಕೇಂದ್ರವಾಗಿದ್ದವು ಯಾದಗಿರಿ ಪ್ರಮುಖ ಕೇಂದ್ರವಾಗಿತ್ತು. ಅವರು ಯುವ ಮಿತ್ರರನ್ನು ಸಂಘಟಿಸಿ ಖಾದಿ ಪ್ರಚಾರ ಮಾಡಲು ಪ್ರಮುಖ ಕೇಂದ್ರವಾಗಿತ್ತು. ಅವರು ಯುವ ಮಿತ್ರರನ್ನು ಸಂಘಟಿಸಿ ಖಾದಿ ಪ್ರಚಾರಮಾಡಲು ಅವರಿಗೆ ಪ್ರೋತ್ಸಾಹಿಸಿದರು. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ವೇಳೆಗೆ ಕೊಲೂರು ಮಲ್ಲಪ್ಪನವರ ಹೆಸರು ಖಾದಿ ಉಣ್ಣೆ ಕೈಗಾರಿಕೆಗಳ ಹೆಸರಿನೊಂದಿಗೆ ಸೇರಿಬಿಟ್ಟಿತ್ತು.

ಗಾಂಧೀಜಿಯವರು ಇವರನ್ನು ಖಾದಿ ಮತ್ತು ಉಣ್ಣೆ ಕೈಗಾರಿಕೆಗಳ ಮುಖ್ಯಸ್ಥನನ್ನಾಗಿ ನೇಮಿಸಿದರು. ಕರ್ನಾಟಕ ಆಂಧ್ರ ಹಾಗೂ ಮಹಾರಾಷ್ಟ್ರ ರಾಜ್ಯಗಳಿಗೆ ಕೊಲೂರು ಮಲ್ಲಪ್ಪನವರು ಒಂದು ವಿಶಾಲವಾದ ನೀತಿಯನ್ನು ರೂಪಿಸಿದರು. ಇದನ್ನು ಗಮನಿಸಿ ಅವರು ಮೈಸೂರು ರಾಜ್ಯದ ಉಣ್ಣೆಯ ಕೈಗಾರಿಕೋದ್ಯಮಿಯ ಸಹಕಾರ ಸಂಘದ ಅಧ್ಯಕ್ಷನಾಗಿ ಉಣ್ಣೆ ಕ್ಷೇತ್ರಕ್ಕೆ ಅಪಾರ ಸೇವೆ ನೀಡಿದರು. ಗಾಂಧೀಜಿಯವರು ಆರಂಭಿಸಿದ ಖಾದಿ ಪ್ರಚಾರದಲ್ಲಿ ಅಪಾರ ಅಭಿಮಾನವನ್ನು ಇಟ್ಟಿದ್ದ ಮಲ್ಲಪ್ಪನವರು ಖಾದಿ ಪ್ರಚಾರದ ಕಾರ್ಯಕ್ಷೇತ್ರಕ್ಕೆ ಅಪಾರವಾಗಿ ದುಡಿದಿದ್ದಾರೆ.

## ಭೂ-ಸುಧಾರಣೆಗಳು

ಭಾರತದ ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಕಾಂಗ್ರೆಸ್‌ನವರು ಭೂಮಿ ಇಲ್ಲದ ರೈತರಿಗೆ ಭೂಮಿಗಳನ್ನು ಕೊಡುವುದಾಗಿ ಆಶ್ವಾಸನೆ ನೀಡಿದರು. ಏಕೆಂದರೆ ಕೆಲವೇ ಜನರ ಹತ್ತಿರ ಭೂಮಿ ಇದ್ದು ಉಳಿದೆಲ್ಲಾ ಜನರು ಭೂಮಿಯನ್ನು ಹೊಂದಿರಲಿಲ್ಲ ಕಾಂಗ್ರೆಸ್ಪಕ್ಷದವರು ಅಧಿವೇಶನದಲ್ಲಿ 1956 ರಲ್ಲಿ ಸಮಾಜವಾದದ ಸಮಾಜ ಸ್ಥಾಪನೆಯ ಗುರಿಯನ್ನು ಹೊಂದಿದ್ದರು. ವಿನೋಬಾ ಭಾವೆಯವರು ಭೂದಾನ ಚಳುವಳಿಯನ್ನು ಆರಂಭಿಸಿದರು. ಇದರ ಪ್ರಮುಖ ಉದ್ದೇಶ ಭೂಮಿಯನ್ನು ಹೊಂದಿರುವದೊಡ್ಡ ಹಿಡುವಳಿದಾರರು ಅವರಾಗಿಯೇ ಸ್ವಯಂ ಪ್ರೇರಣೆಯಿಂದ ಭೂಮಿಯನ್ನು ದಾನವಾಗಿ ಭೂರಹಿತ ಬಡ ರೈತರಿಗೆ ಹಂಚುವುದಾಗಿತ್ತು

ವಿನೋಬಾಭಾವೆಯವರು ಇಡೀ ಭಾರತವನ್ನು ಸುತ್ತಿ ಭೂಮಿಯನ್ನು ದಾನವಾಗಿ ಕೊಡಲು ಕೇಳಿಕೊಂಡರು. ಕೊಲೂರು ಮಲ್ಲಪ್ಪನವರು ವಿನೋಬಾ ಭಾವೆಯವರಿಂದ ಪ್ರೇರಿತರಾಗಿ ಅವರೊಂದಿಗೆ ಕರ್ನಾಟಕದ ಪ್ರವಾಸ ಮಾಡಿದರು. ಜೀತಪದ್ಧತಿ ನಿರ್ಮೂಲನೆ ಋಣ ವಿಮೋಚನೆ, ಬೆಲೆಯೇರಿಕೆ ತಡೆಗಟ್ಟುವಿಕೆ ಮತ್ತು ಭೂ ಶಾಸನದ ಅನುಷ್ಠಾನವನ್ನು ಕುರಿತು ಹೆಚ್ಚು ಒತ್ತು ನೀಡಿದರು ಜೊತೆಗೆ ಕಣ್ಣು ತಪ್ಪಿಸಿ ಮೋಸ ಮಾಡುವ ಅಧಿಕಾರಿಗಳ ವಿರುದ್ಧ ಎಚ್ಚರದಿಂದ ಇರಬೇಕು, ಗೇಣಿದಾರರಿಗೆ ಇದ್ದ 2ನೇ ನಂಬರ್ ಫಾರ್ಮನ್ನು ತೆಗೆದುಕೊಂಡೇ ಅವರಿಗೆ ನೀಡಬೇಕು ಎಂದು ಅಧಿಕಾರಿಗಳಿಗೆ, ಕಾಂಗ್ರೆಸ್ ಕಾರ್ಯಕರ್ತರಿಗೆ ಕಿವಿ ಮಾತು ಹೇಳಿ ಭೂ ಸುಧಾರಣೆಯ ಹತ್ತು ಹಲವು ವಿಚಾರಗಳನ್ನು ಪ್ರಕಟಿಸಿದರು ಹೀಗಾಗಿ ಭೂದಾನ ಚಳುವಳಿಗೆ ಹೈದ್ರಾಬಾದ್ ಪ್ರದೇಶದಲ್ಲೆಲ್ಲ ತುಂಬಾ ಉತ್ತಮವಾದ ಪ್ರತಿಕ್ರಿಯೆ ದೊರಕಿತು.

ಕೊಲೂರು ಮಲ್ಲಪ್ಪನವರು ಶ್ರೀಮತಿ ಇಂದಿರಾಗಾಂಧಿಯವರೊಂದಿಗೆ ಕರ್ನಾಟಕ ಪ್ರವಾಸ ಮಾಡಿ ಅವರ 20 ಅಂಶಗಳ ಕಾರ್ಯಕ್ರಮಗಳನ್ನು ಯಶಸ್ವಿಗೊಳಿಸಿದರು. ಹಿಂದುಳಿದ ವರ್ಗಗಳ ಅಭಿವೃದ್ಧಿಗಾಗಿ ಶ್ರಮಿಸಿದ ಶ್ರೀಯುತರು ಅವರ ಏಳಿಗೆಗಾಗಿ ದುಡಿದರು! ತಾವು ಮುಂದೆ ಬರುವುದು ಮುಖ್ಯವಲ್ಲ ಹಿಂದುಳಿದವರನ್ನು ಮುಂದೆ ತರುವುದೇ ಅವರ ಗುರಿಯಾಗಿದೆ ಇದನ್ನು ತಮ್ಮ ಜೀವಿತ ಕಾಲದವರೆಗೂ ಮುಂದುವರೆಸಿದ್ದಾರೆ.

## ಗಾಂಧೀ ತತ್ವ ಪರಿಪಾಲನೆ

ಸಮಾಜದಲ್ಲಿ ನಡೆಯುವಂತಹ ಹೀನ ಕೃತ್ಯಗಳನ್ನು ಹೊಡೆದೋಡಿಸಿ ಭಾರತ ದೇಶವನ್ನು ಗಾಂಧೀಜಿಯವರ ಅಹಿಂಸಾ ಮಾರ್ಗದಲ್ಲಿ ರೂಪಿಸಬೇಕು ಎಂಬುವುದೇ ಅವರ ಬಲವಾದ ಆಸೆಯಾಗಿತ್ತು ಆ ನಿಟ್ಟಿನಲ್ಲಿ ಜನತೆಯನ್ನು ಉದ್ದೇಶಿಸಿ ಅಹಿಂಸೆಯ ಮಹತ್ವವನ್ನು ಒತ್ತಿ ಹೇಳಿದರು ಆತ್ಮದ ಪೂರ್ಣಬಲದಿಂದ ದುಷ್ಟರ ಹಿಂಸೆಯನ್ನು ಎದುರಿಸುವುದೇ ಅಹಿಂಸೆ ಎಂದು ಹೇಳಿದ ಅವರು ಇದು ಮೋಕ್ಷ ಸಾಧನೆಗೆ ಮಾರ್ಗವೆಂದು ತನ್ನಲ್ಲಿ ಬರುತ್ತಿದ್ದ ಜನ ಸಮೂಹಕ್ಕೆ ಉಪದೇಶ ನೀಡುತ್ತಿದ್ದರಲ್ಲದೆ ತಾವೂ ಆ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಿದ್ದರು.

ಅಸ್ಪೃಶತೆಯನ್ನು ವಿರೋಧಿಸಿದ ಅವರು ಇದು ದೇಶದ ಐಕ್ಯತೆಗೆ ಕೊಡಲಿ ಪೆಟ್ಟು ಹಾಕುತ್ತದೆಯಲ್ಲದೆ ಹಿಂದೂ ಧರ್ಮದ ಕಳಂಕವಾಗಿದೆ ಎಂದು ಹೇಳಿ ಈ ನಾಡಿನಲ್ಲಿ ಜೀವಿಸುವ ಎಲ್ಲರೂ ಸಮಾನರು ಸ್ವಾತಂತ್ರ್ಯಕ್ಕಾಗಿ ಗಾಂಧೀಜಿಯ ನೇತೃತ್ವದಲ್ಲಿ ಎಲ್ಲ ಧರ್ಮಿಯರು ಹೋರಾಟ ಮಾಡಿಲ್ಲವೆ? ಅದನ್ನು ಉಳಿಸಿಕೊಂಡು ಹೋಗುವುದು ನಮ್ಮೆಲ್ಲರ ಕರ್ತವ್ಯವಾಗಿದೆ ಎಂದು ಸಮಾಜವನ್ನು ಉದ್ದೇಶಿಸಿ ಹೇಳುತ್ತಿದ್ದರು. ಎಲ್ಲಿಯವರೆಗೆ ಅಸ್ಪೃಶ್ಯತೆಯು ಹೋಗುವುದಿಲ್ಲವೋ ಅಲ್ಲಿಯವರೆಗೆ ಸಮಾಜ ಸುಧಾರಿಸಲಾಗದು ಎಂದು ಹೇಳಿದ ಅವರು ಗಾಂಧೀಜಿಯವರ ತತ್ವವಾದ ಎಲ್ಲ ಧರ್ಮಗಳು ಒಂದಾಗಬೇಕು ಎಂಬ ಅರ್ಥದಲ್ಲಿ ನಂಬಿಕೆ ಇಟ್ಟಿದ್ದರು.

ಅದರಂತೆ ಶ್ರೀ ಮಲ್ಲಪ್ಪನವರು ಹಿಂದೂ ಮುಸ್ಲಿಂರಲ್ಲಿ ಐಕ್ಯತೆಯನ್ನು ಮೂಡಿಸಲು ಹಳ್ಳಿ ಹಳ್ಳಿಗಳನ್ನು ಸಂಚರಿಸಿ ನಾವೆಲ್ಲರೂ ಒಂದೇ ಎನ್ನುವ ಅರ್ಥವನ್ನು ಬೋಧಿಸಿದರು ಧರ್ಮಧರ್ಮಗಳು ಬೇರೆಯಾದರೂನಾವೆಲ್ಲ ಸೌಹಾರ್ದತೆಯಿಂದ ಬಾಳಬೇಕು ಮುಂದಿನ ಸಮಾಜಕ್ಕೆ ಮಾದರಿಯಾಗಬೇಕು ಎಂದು ಹೇಳಿದ ಅವರು ತಮ್ಮ ರಾಜಕೀಯ ದಿನಮಾನಗಳಲ್ಲಿ ಅನೇಕ ಹಿಂದೂ ಮುಸ್ಲಿಂ ತಂಟೆ ತಕರಾರುಗಳನ್ನು ಬಗೆಹರಿಸಿ ಇವರ ಮಧ್ಯ ಸೇತುವೆಯಾಗಿದ್ದರು.

ಗ್ರಾಮಗಳ ಉದ್ಧಾರವೇ ದೇಶದ ಉದ್ಧಾರ ಎಂದು ತಿಳಿದ ಅವರು ಇದು ಉದ್ಧಾರವಾಗದೆ ಪ್ರಗತಿ ಅಸಾಧ್ಯವೆಂದು ಹೇಳಿದರು ಪ್ರತಿಯೊಂದು ಗ್ರಾಮದಲ್ಲಿ ಗುಡಿ ಕೈಗಾರಿಕೆ ಸ್ಥಾಪನೆಯಾಗಬೇಕು,

ಕೆಲವೊಂದು ಮುಖ್ಯವಾದ ಸೌಲಭ್ಯಗಳನ್ನು ಒದಗಿಸಬೇಕೆಂದು ಸಾರಿ ಹೇಳಿದರಲ್ಲದೆ ಅವುಗಳ ನಿರ್ಮಾಣಕ್ಕೆ ತಮ್ಮ ಆಡಳಿತಾವಧಿಯಲ್ಲಿ ಮುಂದಾದರು.ಅವುಗಳೆಂದರೆ ರಸ್ತೆಗಳ ನಿರ್ಮಾಣ ಶುದ್ಧವಾದ ನೀರಿನ ಪೂರೈಕೆ,ವಿದ್ಯಾಶಾಲೆ ಶಾಲೆಗಳು ಜ್ಞಾನದ ಆಗರವಾಗಬೇಕೆಂದು ಹೇಳಿದರಲ್ಲದೆ ಗ್ರಾಮ ಪಂಚಾಯ್ತಿಗಳು ಸಮರ್ಪಕ ರೀತಿಯಲ್ಲಿ ಕೆಲಸ ಮಾಡಲು ತಿಳಿಸಿ ಅವುಗಳಿಗೆ ತಮ್ಮದಾದ ಸೇವೆಯನ್ನು ಸಲ್ಲಿಸಿದರು ಗಾಂಧೀಜಿಯವರ ರಾಮರಾಜ್ಯದಲ್ಲಿ ಅಪಾರ ನಂಬಿಕೆಯನ್ನು ಇಟ್ಟುಕೊಂಡಿದ್ದ ಅವರು ಶಿಕ್ಷಣ ನೀಡಿ ಜನರಲ್ಲಿ ಅಜ್ಞಾನವನ್ನು ಹೊಡೆದೋಡಿಸಬೇಕು ಇಂದಿನ ಯುವ ಪೀಳಿಗೆಗೆ ಸ್ವಾವಲಂಬನೆಯಾಗುವಂತಹ ಶಿಕ್ಷಣ ನೀಡಬೇಕು ಗುರಿ ತತ್ವ ನೈಜತೆಯನ್ನು ಆ ಶಿಕ್ಷಣ ಹೊಂದಿರಬೇಕು ಮಗುವಿಗೆ ಶಿಕ್ಷಣದಲ್ಲಿ ಸ್ವಾತಂತ್ರ್ಯ ಇರಬೇಕು ಮಾನಸಿಕ ದೈಹಿಕ ಸದೃಢತೆಯ ಬೆಳವಣಿಗೆಗೆ ಆ ಶಿಕ್ಷಣ ಪೂರಕವಾಗಿರಬೇಕು ಎಂಬುವುದು ಅವರ ನಿಲುವಾಗಿತ್ತು ಅಂಥ ಶಿಕ್ಷಣವನ್ನು ಜಾರಿಗೊಳಿಸಲು ಸಂಸತ್ ಸದಸ್ಯರಾಗಿದ್ದ ಕಾಲಾವಧಿಯಲ್ಲಿ ಸರಕಾರಕ್ಕೆ ಒತ್ತಾಯಿಸಿದರಲ್ಲದೆ ಜನರಲ್ಲಿ ಇದರ ಕಲ್ಪನೆಯನ್ನು ಮೂಡಿಸಿದರು.

ಬಡತನ ನಿರ್ಮೂಲನೆಯಾಗಬೇಕಾದರೆ ಜನರು ಸ್ವಂತ ಕಾರ್ಯಮಾಡಬೇಕು ಎಲ್ಲರೂ ಸರಕಾರಿ ಉದ್ಯೋಗ ಮಾಡಬೇಕಾದರೆ ಅದು ಹೇಗೆ ಸಾಧ್ಯ? ಎಲ್ಲರೂ, ತಮ್ಮ ತಮ್ಮ ವೃತ್ತಿಪರ ಕೆಲಸಗಳಲ್ಲಿ ತೊಡಬೇಕು ಅಂದಾಗ ಮಾತ್ರ ನಿರುದ್ಯೋಗ ಸಮಸ್ಯೆಯನ್ನು ಇಲ್ಲವಾಗಿಸಬಹುದು ಎಂದು ಹೇಳಿದ ಅವರು ಸ್ವಾವಲಂಬನೆಯ ಅರ್ಥವನ್ನು ಬಿಂಬಿಸಿದರು ಸಮಾಜಸುಧಾರಕರಾದ ಲಾರ್ಡ್‌ವಿಲಿಯಂ ಬೆಂಟಿಂಕ್, ರಾಜಾರಾಮ್ ಮೋಹನರಾಯ ಗಾಂಧೀಜಿಯ ಪ್ರಭಾವಕ್ಕೆ ಒಳಗಾದ ಶ್ರೀ ಮಲ್ಲಪ್ಪನವರು ಸಾಮಾಜಿಕ ಸುಧಾರಣೆಗೆ ಕೈಹಾಕಿದರು. ಆ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾದರು.

ಪ್ರಪಂಚದ ಜ್ಞಾನವನ್ನು ಅರಿಯದ ಎಳೆಯ ಮಕ್ಕಳಿಗೆ ವಿವಾಹ ಮಾಡುವ ಅನರ್ಥಕಾರಿ ಪದ್ದತಿಯು ಸಮಾಜದಲ್ಲಿ ಪರಂಪರಾಗತವಾಗಿ ಬೆಳೆದು ಬಂದದ್ದನ್ನು ಅರಿತ ಅವರು ಇದರ ನಿರ್ಮೂಲನೆಗೆ ಮುಂದಾದರು. ಇದರಿಂದಾಗುವ ಹಾನಿಯನ್ನು ಕುರಿತು ಜನಸಾಮಾನ್ಯರಿಗೆ ತಿಳಿಸಿದರು. ಬೆಂಟಿಂಕ್‌ನು ರೂಪಿಸಿದ ಪುನರ್ ವಿವಾಹ ಶಾಸನ ಇನ್ನು ಹಳ್ಳಿಗಳಲ್ಲಿ ಪರಿಣಾಮಕಾರಿಯಾಗಿ ಜಾರಿಗೆ ಬಂದಿರಲಿಲ್ಲ. ವಿಧವೆಯು ಸಮಾಜದಲ್ಲಿ ಜೀವನವಿಡೀ ಕೊರಗುವ ಕೆಟ್ಟ ಪದ್ಧತಿಗೆ ಮಂಗಳ ಹಾಡಿ ಅವರ ಪುನರ್ ವಿವಾಹಕ್ಕೆ ಪ್ರೋತ್ಸಾಹ ನೀಡಿದರು. ವಿಧವೆಯರನ್ನು ಕೀಳಾಗಿ ಕಾಣುವುದರಿಂದ ಅವರು ಬದುಕುವ ಹೊಸ ಆಸೆ ಬತ್ತಿದಂತಾಗುತ್ತದೆ. ನವಚೈತನ್ಯ ಮೂಡಿಸಲು ಸಮಾಜ ಮುಂದಾಗಬೇಕು ಎಂಬುವುದು ಅವರ ತತ್ವವಾಗಿತ್ತು.

ಸ್ತ್ರೀಯರ ಸ್ಥಾನವನ್ನು ಎತ್ತರಿಸಲು ಪ್ರಯತ್ನಿಸಿದರಲ್ಲದೆ ಸ್ತ್ರೀ ಪುರುಷರು ಬಂಡಿಯ ಎರಡು ಗಾಲಿಗಳಿದ್ದಂತೆ ಅರಿತು ಬೆರೆತು ನಡೆದಾಗಲೇ ಸಂಸಾರ ಸುಖದ ಸುಪ್ಪತ್ತಿಗೆಯಾಗುವುದು ಎಂದು ಅವರು ಹೇಳುತ್ತಿದ್ದರು. ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿತು ಎಂಬುವ ನಿಲುವನ್ನು ತಾಳುವ

ಜನರಿಗೆ ಶ್ರೀಮಲ್ಲಪ್ಪನವರು ಬುದ್ಧಿವಾದ ಹೇಳುತ್ತಿದ್ದರು ಹೆಣ್ಣಲ್ಲವೆ ನಮ್ಮನ್ನು ಹೆತ್ತತಾಯಿ? ಎಂದು ಪ್ರಶ್ನಿಸುತ್ತಿದ್ದರು. ಸ್ತ್ರೀಯರನ್ನು ಪೂಜ್ಯ ಭಾವನೆಯಿಂದ ಕಾಣಬೇಕು ಎಂಬುದು ಅವರ ನಿಲುವಾಗಿತ್ತು ಬಹುಪತ್ನಿತ್ವವನ್ನು ವಿರೋಧಿಸುತ್ತಿದ್ದರು ಸಾರ್ವಜನಿಕ ರಂಗದಲ್ಲಿ ಮಹಿಳೆಯರು ಭಾಗವಹಿಸಬೇಕು.ಮಹಿಳೆ ಪುರುಷನಿಗೆ ಹೆಗಲೆಣೆಯಾಗಿದ್ದಾಳೆ ಸಮಾಜದಲ್ಲಿ ಅವಳು ಮುಂದೆ ಬರಬೇಕು, ಎಂದು ಹೇಳಿದ ಅವರು ಅಡಿಗೆ ಮನೆಯೊಂದೆ ಅವಳ ಕಾರ್ಯಕ್ಷೇತ್ರವಾಗಬಾರದು ಅವಳು ಸಮಾಜದ ಎಲ್ಲಾ ಕ್ಷೇತ್ರದಲ್ಲಿ ಸಕ್ರಿಯವಾಗಿ ಭಾಗಿಯಾಗಬೇಕು ಎಂದು ಕರೆ ನೀಡಿದರಲ್ಲದೆ ಮಹಿಳೆಯರ ಅಭಿವೃದ್ಧಿಯ ಕಾರ್ಯಗಳ ಅನುಷ್ಠಾನಕ್ಕಾಗಿ ಶ್ರಮಿಸಿದರು ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ ಎಂಬ ತತ್ವದಲ್ಲಿ ಅಪಾರ ನಂಬಿಕೆ ಇಟ್ಟಿದ್ದ ಅವರು ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡಬೇಕು ಅವಳ ಮಕ್ಕಳಿಗೆ ಸ್ಫೂರ್ತಿಯಾಗಬಲ್ಲುದು ಎಂದು ಹೇಳಿ ಮಹಿಳೆಯ ಶಿಕ್ಷಣದ ಮಹತ್ವವನ್ನು ಜನರಲ್ಲಿ ತಿಳಿಸಲು ಅವರು ಹಳ್ಳಿ ಹಳ್ಳಿಗಳನ್ನು ಸಂಚರಿಸಿ ಸ್ತ್ರೀ ಶಿಕ್ಷಣದ ಮಹತ್ವವನ್ನು ಮೂಡಿಸಲು ಪ್ರಯತ್ನಿಸಿದರು ಮಹಿಳೆ ಕಲಿತು ಏನು ಸಾಧಿಸುವುದಿದೆ ಎಂಬ ಮೂಢನಂಬಿಕೆಯಿಂದ ಹೊರಬಂದು ಅವಳಿಗೆ ಶಿಕ್ಷಣ ಕೊಡುವ ಬಗ್ಗೆ ಗಮನಕೊಡಿ ಎಂದು ಅವರು ಜನತೆಗೆ ಕರೆ ನೀಡಿದರು.

ದೇವರ ಹೆಸರಿನಲ್ಲಿ ನಡೆಯುವ ಪ್ರಾಣಿ ಬಲಿಗಳನ್ನ ಕೊಡುವ ಪದ್ಧತಿಯನ್ನು ಅವರು ವಿರೋಧಿಸಿ ಈ ಕೆಟ್ಟ ಪದ್ಧತಿಯನ್ನು ಸಮಾಜದಿಂದ ಇಲ್ಲವಾಗಿಸಬೇಕು ಎಂದು ಹೇಳಿ ಸರ್ಕಾರಕ್ಕೆ ಒತ್ತಾಯಿಸಿದರು ಗಾಂಧಿವಾದಿಯಾಗಿದ್ದ ಅವರು ಕಾಲನಡಿಗೆಯಲ್ಲಿ ಹಲವು ಹಳ್ಳಿಗಳನ್ನು ಸಂದರ್ಶಿಸಿ ಪ್ರಾಣಿಬಲಿ ಕೊಡುವಪದ್ಧತಿಯನ್ನು ಕೈಬಿಡಲು ಕೇಳಿಕೊಂಡರು ಪ್ರಾಣಿಬಲಿ ಕೊಡುವ ಸಮಯದಲ್ಲಿ ಅಲ್ಲಿಗೆ ಹೋಗಿ ನೆರೆದ ಜನರಲ್ಲಿ ಈ ಮೂಕ ಪ್ರಾಣಿಯನ್ನು ಬಲಿಕೊಡುವುದರಿಂದ ದೇವರು ನಿಮಗೆ ಮೆಚ್ಚಲಾರ ಇದು ದೇವರಿಗೆ ಸಂತೋಷತರುವ ಕಾರ್ಯವಲ್ಲ. ಯಾವ ದೇವರೂ ತನಗೆ ಆಹಾರ ಕೊಡಿ ಎಂದು ಬೇಡುವುದಿಲ್ಲ.

ಇದು ನಮ್ಮ ಹಿರಿಯರು ಹಾಕಿಕೊಂಡು ಬಂದಿರುವ ಕೆಟ್ಟ ವ್ಯವಸ್ಥೆಯಾಗಿದೆ ಪ್ರಾಣಿಯನ್ನು ಬಲಿಕೊಡುವುದು ಎಂದರೆ ಮನುಷ್ಯನನ್ನು ಬಲಿಕೊಟ್ಟಂತೆ ಅಲ್ಲವೆ? ಗಾಂಧೀಜಿಯವರ ತತ್ವದಂತೆ ನಮ್ಮ ಬದುಕಿನ ದಾರಿಯನ್ನು ನಾವು ರೂಪಿಸಿಕೊಳ್ಳಬೇಕು ದೇವರನ್ನು ಸಂತೋಷಪಡಿಸುವುದಿದ್ದರೆ ಸಿಹಿ ಪದಾರ್ಥಗಳನ್ನು ಮಾಡಿ ದೇವರಿಗೆ ಭಕ್ತಿಯಿಂದ ಪೂಜಿಸಿ ನಾಲ್ಕು ಜನರಿಗೆ ಊಟ ಹಾಕಿದರೆ ಅದು ಪುಣ್ಯವೆನಿಸುವುದು ಎಂದು ತಿಳಿಸಿ ಹೇಳಿದ ಅವರು ಪ್ರಾಣಿ ಬಲಿಯನ್ನು ಕೊಡಲು ಹೊರಟಿದ್ದ ಜನರಿಗೆ ತಡೆಹಿಡಿದರು ಅವರು ಯುವಕರಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಮೂಡಿಸಲು ಮುಂದಾದರು.

ಸಮಾಜದಲ್ಲಿ ಮಹಿಳೆಯರು ಪ್ರೌಢಾವಸ್ಥೆಗೆ ಬರುವುದಕ್ಕಿಂತ ಮುಂಚಿತವಾಗಿ ಮದುವೆಯಾಗುವ ವ್ಯವಸ್ಥೆ ಅಂದು ಕೆಲ ಮಟ್ಟಿಗೆ ಹಾಲುಮತ ಸಮಾಜದಲ್ಲಿ ಉಳಿದು ಬಂದಿತ್ತು.

ಇದನ್ನು ತಿಳಿದಿದ್ದ ಮಲ್ಲಪ್ಪನವರು ಈ ಜನಾಂಗದ ಹಿರಿಯ ಮುಖಂಡರನ್ನು ಒಂದೆಡೆಸೇರಿಸಿ ಅವರು ಈ ಸದ್ಧತಿಯನ್ನು ಬಿಡಲು ತಿಳಿಸಿದರು ಮೊದಲು ನಿರಾಕರಿಸಿದ ಅವರು ನಂತರ ಮಲ್ಲಪ್ಪನವರ ಮಾತಿನಂತೆ ಒಪ್ಪಿಕೊಂಡರು ಮಲ್ಲಪ್ಪನವರು ಅವರನ್ನು ಕುರಿತು ಹೀಗೆ ಹೇಳಿದರು ಪ್ರತಿಯೊಂದು ಜೀವಿ ಪ್ರೌಢಾವಸ್ಥೆಗೆ ಬರುವುದು ಪ್ರಕೃತಿಯ ನಿಯಮ ಮದುವೆಯಾಗದೆ ಇದ್ದರೆ ಏನೂ ಹಾನಿ ಇಲ್ಲ ಪ್ರೌಢಾವಸ್ಥೆ ಅವರಲ್ಲಿ ತಿಳಿವಳಿಕೆಯನ್ನು ಹೆಚ್ಚಿಸುತ್ತದೆ ಮುಂದಾಗುವ ಅನಾಹುತಗಳನ್ನು ಬಹುಮಟ್ಟಿಗೆ ಅದು ತಡೆಯಬಹುದು ಎಂದು ಹೇಳಿ ಜನಾಂಗದ ಎಲ್ಲರಿಗೂ ತಿಳಸುವಂತೆ ಹೇಳಿಕಳಿಸಿದರು. ಈ ಪದ್ಧತಿಯನ್ನು ಮುಂದೆ ಕೈ ಬಿಡಲಾಯಿತು ಇದು ಈ ಜನಾಂಗಕ್ಕೆ ಮಲ್ಲಪ್ಪನವರು ಕೊಟ್ಟ ಕೊಡುಗೆಯಾಗಿದೆ.

## ಕುಷ್ಠರೋಗಿಗಳಿಗಾಗಿ ಅವರ ಸೇವೆ

ಶ್ರೀ ಮಲ್ಲಪ್ಪನವರು ಸಂಸತ್ ಸದಸ್ಯರಾಗಿದ್ದಾಗ ಕುಷ್ಠರೋಗದ ನಿರ್ಮೂಲನೆಗೆ ಬಹಳ ಆದ್ಯತೆ ನೀಡಿದರು ಇದು ಮಾನವ ಕುಲಕೋಟಿಯನ್ನು ಹಿಂಸೆಗೆ ಗುರಿ ಮಾಡಿದೆ. ಕೊಲೂರು ಅಂದಿನ ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿಯವರ ಮುಂದೆ ಕುಷ್ಠರೋಗದ ಬಗ್ಗೆ ಪ್ರಸ್ತಾಪಿಸಿದರು. ಇದನ್ನು ನಿರ್ಮೂಲನೆಗೊಳಿಸಲು ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕೆಂದು ಅವರಲ್ಲಿ ಕೇಳಿಕೊಂಡರು ನೀವು ಹೇಳಿದ ಮೇಲೆ ಆಯಿತು ಮಲ್ಲಾಪ್ಪಾಜಿಯವರೆ ಎಂದು ಹೇಳಿ 2000 ಇಸವಿಯವರೆಗೆ ಇದನ್ನು ಸಂಪೂರ್ಣ ನಿರ್ಮೂಲನೆ ಮಾಡುತ್ತೇವೆ ಎಂದು ಆಶ್ವಾಸನೆ ಇತ್ತರು.

ಪ್ರಧಾನ ಮಂತ್ರಿಯವರು ತಮ್ಮ 20 ಅಂಶಗಳ ಕಾರ್ಯಕ್ರಮಗಳಲ್ಲಿ ಕುಷ್ಠರೋಗ ನಿರ್ಮೂಲನ ಕಾರ್ಯಕ್ರಮವನ್ನು ಸೇರಿಸಿಕೊಂಡು ವ್ಯಾಪಕ ಕಾರ್ಯಗಳನ್ನು ಕೈಗೊಂಡರು. ಅಂದಿನ ಆರೋಗ್ಯ ಮಂತ್ರಿ ಮೊಹಸಿನಾ ಕಿದ್ವಾಯಿಯವರಿಗೂ ಕೂಡ ಮಲ್ಲಪ್ಪನವರು ಈ ರೋಗದ ಭೀಕರತೆಯನ್ನು ಮತ್ತು ಹಳ್ಳಿ ಪಟ್ಟಣಗಳಲ್ಲಿ ರೋಗಿಗಳು ಪಡುವ ಬವಣೆಯನ್ನು ಕುರಿತು ವಿವರಿಸಿದರು.

ಏನು ಮಲ್ಲಪ್ಪಾಜಿಯವರೆ ಇನ್ನಿತರ ಮಾರಕ ರೋಗಗಳ ಬಗ್ಗೆ ಹೇಳದೆ ಈ ಕುಷ್ಠರೋಗದ ಬಗ್ಗೆ ಅಷ್ಟು ಕಾಳಜಿ ವಹಿಸಿ ಹೇಳುತ್ತಿದ್ದೀರಿ ಎಂದು ಪ್ರಶ್ನಿಸಿದಾಗ, ಮ್ಯಾಡಂರವರೇ, ಈ ರೋಗ ನನಗ ಇಲ್ಲವೆ ನಿಮಗೆ ಬಂದಿದ್ದರೆ ಎಂಥ ಪರಿಸ್ಥಿತಿಯನ್ನು ನಾವು ಸಮಾಜದಲ್ಲಿ ಎದುರಿಸಬೇಕಾಗಿತ್ತು. ನೀವು ವಿಚಾರ ಮಾಡಿರಿ. ನಾವು ಇಲ್ಲಿ ಬಂದು ಕುಳಿತುಕೊಳ್ಳಲಿಕ್ಕೆ ಆಗುತ್ತಿತ್ತೆ? ಹೌದು ಮಲ್ಲಪ್ಪಾಜಿಯವರೆ ಈಗ ನಾನು ಏನು ಮಾಡಲಿ? ನೀವು ಈ ರೋಗದ ಭೀಕರತೆಯನ್ನು ತಡೆಗಟ್ಟಲು ತ್ವರಿತಗತಿಯಲ್ಲಿ ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕು ಇದನ್ನು ಅಂಟುರೋಗ ಎಂಬ ಮೂಢನಂಬಿಕೆಯನ್ನು ಹೊಡೆದೋಡಿಸಬೇಕು ಈ ರೋಗಿಗಳಿಗ ಸಾಮಾಜಿಕ ಬದುಕನ್ನು ನೀಡುವ ಕಾರ್ಯಗಳನ್ನು ಹಾಕಿಕೊಳ್ಳಿ ಎಂದು ಒತ್ತಿ ಹೇಳಿದರು.

ಅಂದು ಗಾಂಧೀಜಿಯವರು ಈ ರೋಗಿಗಳನ್ನು ಸ್ವತಃ ಮುಟ್ಟಿ ಸೇವೆ ಮಾಡುತ್ತಿದ್ದರು ನಾವು ಕೂಡ ಗಾಂಧೀಜಿಯವರ ಹಾದಿತುಳಿದರೆ ಕುಷ್ಠರೋಗಿಗಳಿಗೆ ಸಮಾಜದಲ್ಲಿ ಬದುಕುವ ಹೊಸ ಆಶೆ ಮೂಡಬಹುದು ಇದೊಂದು ಅಂಟುರೋಗವಲ್ಲ ಅವರ ಸಮಸ್ಯೆಗೆ ನಾವು ಸ್ಪಂದಿಸ ಬೇಕಾಗಿದೆ ಎಂದು ಹೇಳಿದ ಅವರು ಅವರೊಂದಿಗೆ ಇಂದಿಗೂ ಸ್ಪಂದಿಸುತ್ತಿರುವುದನ್ನು ಕಾಣಬಹುದು. ಇತ್ತೀಚಿಗೆ ಸರಕಾರ ಇದಕ್ಕೆ ಪ್ರತ್ಯೇಕ ವಿಭಾಗವನ್ನು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ತೆರೆದಿದೆಯಾದರೂ ಅವರಿಗೆ ಸೂಕ್ತ ರೀತಿಯ ಔಷಧಿಯನ್ನು ಕೊಡುವ ವ್ಯವಸ್ಥೆ ಇನ್ನು ಆಗಬೇಕಾಗಿದೆ ಎಂದು ಅವರು ಹೇಳುತ್ತಿದ್ದರು.

ಕುಷ್ಠರೋಗಿಗಳ ಹೀನಾಯ ಸ್ಥಿತಿಯನ್ನರಿತು ಅವರು ಈ ರೋಗಿಗಳಿಗೆ ಉತ್ತಮ ಬದುಕನ್ನು ನೀಡಲು ಕಂಕಣಬದ್ಧರಾಗಿ ಪುನರ್ ವಸತಿ ಕಲ್ಪಿಸಲು ತಮ್ಮ ಎಲ್ಲಾ ಆಸ್ತಿಯನ್ನು ಒಟ್ಟುಗೂಡಿಸಿ ಜನತಾ ಟ್ರಸ್ಟ್ ಎಂಬ ಸ್ವಯಂ ಸೇವಾ ಸಂಘವನ್ನು 1981 ರಲ್ಲಿ ನೋಂದಣಿ 160/634 ಸ್ಥಾಪಿಸಿದರು. ಒಂದು ಶಾಖೆ ಗುಲಬರ್ಗಾ ಜಿಲ್ಲೆಯ ಯಾದಗಿರಿಯಲ್ಲಿ ತೆರೆದರು ಇದರ ಗುರಿಗಳು ಆಸ್ಪತ್ರೆಗಳನ್ನು ಸ್ಥಾಪಿಸುವುದು ಸ್ವಯಂ ಸಂಘಗಳಿಂದ ವೈದ್ಯರನ್ನು ನೇಮಿಸುವುದು ಔಷಧಿಯನ್ನು ಉಚಿತವಾಗಿ ನೀಡುವುದು ರೋಗಿಗಳಿಗೆ ಪುನರ್‌ವಸತಿ ನಿರ್ಮಿಸುವುದು.

ಕುಷ್ಠರೋಗಿಗಳ ಆಶ್ರಮ ಸ್ಥಾಪಿಸುವುದು ಅವರನ್ನು ಗ್ರಾಮೋದ್ಯೋಗಗಳಲ್ಲಿ ನೇಮಿಸುವುದು, ಕುಷ್ಠರೋಗ ದಿನಾಚರಣೆ ಆಚರಿಸುವುದು ಕುಷ್ಠರೋಗ ಸಪ್ತಾಹ ಆಚರಣೆ ಮಾಡುವುದು ಪ್ರತಿನಿತ್ಯ ಮಕ್ಕಳಿಗೆ ಪರೀಕ್ಷೆ ಮಾಡುವುದು ರೋಗದ ಬಗ್ಗೆ ಪುಸ್ತಕ ಬಿಡುಗಡೆಗೊಳಿಸುವುದು ಇತ್ಯಾದಿ ಅವರು ಇದಕ್ಕಾಗಿ ನಿವೇಶನ ಹಾಗೂ ಧನಸಹಾಯ ಬೇಕೆಂದು ಕೇಂದ್ರ ಮತ್ತು ರಾಜ್ಯ ಸರಕಾರಗಳನ್ನು ಕೇಳಿಕೊಂಡರು

ಕರ್ನಾಟಕ ಸರಕಾರದವರು 55 ಎಕರೆ ಭೂಮಿಯನ್ನು ವರಕನಹಳ್ಳಿ ಯಾದಗಿರಿ ಹತ್ತಿರ ಜನತಾ ಟ್ರಸ್ಟಿಗೆ ನೀಡಿದರು. ಅವರು ಈ ರೋಗಿಗಳು ಕೆಲಸಮಾಡಲು ಗುಡಿಕೈಗಾರಿಕೆ ಸ್ಥಾಪಿಸುವ ಉದ್ದೇಶವನ್ನು ಹೊಂದಿದ್ದು ಅಲ್ಲಿ ಉತ್ತಮ ನೀರಿನ ವ್ಯವಸ್ಥೆಯನ್ನು ಮಾಡಿದರಲ್ಲದೆ ಈ ರೋಗಿಗಳು ವಿಶ್ರಾಂತಿ ಪಡೆಯಲು ಅವರು ನೆಲೆಸುವ ಪ್ರದೇಶದಲ್ಲಿ ಸಸಿಗಳನ್ನು ನೆಡುವ ಕಾರ್ಯದಲ್ಲಿ ಶ್ರೀಯುತರು ನಿರತರಾದರು ಸುತ್ತ ಮುತ್ತಲಿನ ಪ್ರದೇಶದಲ್ಲಿ ಆಹ್ಲಾದಕರ ವಾತಾವರಣ ಇರಲಿ ಎಂಬುದೇ ಆಗಿದೆ ಯಾದಗಿರಿಯ ಬಸ್ ಡಿಪ್ಪೋ ಸಮೀಪದ ಹೊಸಹಳ್ಳಿ ಹತ್ತಿರದಲ್ಲಿ 52 ವಸತಿಗಳನ್ನು ನಿರ್ಮಿಸಿ ಈ ರೋಗಿಗಳಿಗೆ ವಾಸಿಸಲು ನೀಡಿದ್ದಾರೆ ಇದು ಅವರ ಮಹತ್ವದ ಸಾಧನೆ ಎಂದು ಹೇಳಬಹುದು.

ರೋಗಿಗಳಿಗೆ ಶಾಶ್ವತವಾದ ನೆಲೆಯನ್ನು ಒದಗಿಸುವುದು ನನ್ನ ಹೊಣೆಯಾಗಿತ್ತು, ಅದನ್ನು ಅವರಿಗೆ ನೀಡಿದ್ದೇನೆ ಎಂದು ಹೇಳುತ್ತಿದ್ದರಲ್ಲದೆ ಅವರು ತಮ್ಮಲ್ಲಿಗೆ ಬರುವ ಈ ರೋಗಿಗಳನ್ನು ಪ್ರೀತಿಯಿಂದ ಕಂಡು ಅವರಿಗೆ ಬ್ರೆಡ್ ಹಣ್ಣು ಕೊಟ್ಟು ಕಳಿಸುತ್ತಾರೆ. ಒಂದೊಂದು ದಿನ ಈ

ರೋಗಿಗಳು ಅವರ ಮನೆಯ ತುಂಬಾ ಕಾಣಸಿಗುತ್ತಾರೆ ಯಾವುದೇ ಭಿಕ್ಷುಕ ಬಂದರೆ ಬೇಡಿ ಏಕೆ ತಿನ್ನುತ್ತೀರಿ? ನಿಮ್ಮ ಕೈಕಾಲು ಗಟ್ಟಿಯಾಗಿಲ್ಲವೆ? ದುಡಿದು ತಿನ್ನಲು ನಿಮಗೆ ನಾಚಿಕೆ ಏಕೆ ಎಂದು ಹೇಳಿಕಳಿಸುವ ಅವರಿಗೆ ಈ ರೋಗಿಗಳನ್ನು ಕಂಡರಂತೂ ಅಪಾರ ಪ್ರೀತಿ. ಅವರೊಂದಿಗೆ ಮಾತನಾಡುವಾಗ ಒಂದು ತರಹದ ಜಿಗುಪ್ಸೆ ಭಾವನೆ ಕಡಿಮೆಯಾಗುವಂತೆ ಮಾತನಾಡುತ್ತಾರೆ. ನಿಮಗೆ ಉತ್ತಮ ವ್ಯವಸ್ಥೆ ಮಾಡುವ ವಿಚಾರದಲ್ಲಿ ನಾನು ಇದ್ದೇನೆ ಎಂದು ಹೇಳುತ್ತಿದ್ದ ಅವರು ಇದೀಗ ಅವರ ಉದ್ಧಾರಕ್ಕಾಗಿ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡಿದ್ದರು.

ಏಕೆಂದರೆ ಅವರು ಪ್ರಾಚೀನ ಕಾಲದಿಂದ ಈ ರೋಗಕ್ಕೊಳಗಾಗದವರು ಈ ಸಮಾಜದಲ್ಲಿ ಎಂಥ ಕಷ್ಟವನ್ನು ಅನುಭವಿಸುತ್ತಿದ್ದಾರೆ ಎಂಬುದು ಮನಗಂಡಿದ್ದರು ಅವರ ಸ್ವಯಂ ಸೇವಾ ಸಂಘವು ಮೊದಲು ಬಲಹೀನರಿಗೆ ಶಿಕ್ಷಣವನ್ನು ಒದಗಿಸುವುದೇ ಆಗಿತ್ತು ಆದರೆ ಅವರು ಈ ರೋಗದ ವಿಷಮ ಪರಿಸ್ಥಿತಿಯನ್ನು ಅರಿತು ಅವರಿಗೆ ನೆಲೆಯನ್ನು ಕಲ್ಪಿಸುವುದರ ವಿಚಾರಕ್ಕೆ ಕೈಹಾಕಿ ಪೂರ್ಣಗೊಳಿಸಿದರು ಈ ರೋಗಿಗಳಿಗೆ ಅವರು ತೋರುವ ಪ್ರೀತಿಯಿಂದಾಗಿ ಅವರನ್ನು ಕಾಣಲು ಧಾವಿಸಿ ಬರತೊಡಗಿದ್ದಾರೆ. ಬಂದರೋಗಿಗಳನ್ನು ಅವರು ಹತ್ತಿರಕ್ಕೆ ಕರೆದು ಅವರ ಮನಸ್ಸಿನ ವಿಚಾರಗಳನ್ನು ತಿಳಿದುಕೊಂಡು ಅವರಿಗೆ ಸೂಕ್ತ ಮಾರ್ಗದರ್ಶನ ನೀಡುತ್ತಾರಲ್ಲದೆ ಅವರಿಗೆ ಸಮಾಜದಲ್ಲಿ ಜೀವಿಸುವ ನವ ಚೈತನ್ಯವನ್ನು ತುಂಬಿದ್ದಾರೆ. ಅನೇಕ ಮಹಾನುಭಾವರ ವಿಚಾರ ಧಾರೆಗಳನ್ನು ಅವರಿಗೆ ಹೇಳುವ ಶ್ರೀಯುತರು ತಾವು ಹೇಳುವ ವಿಚಾರಗಳನ್ನು ಕೇಳುವವರಿಗಾದರೂ ಅವರ ಮನಸ್ಸು ಆನಂದದಲ್ಲಿ ಇರಲಿ ಎಂಬುದೇ ನನ್ನ ಆಸೆ ಎನ್ನುತ್ತಿದ್ದರು.

ಕುಷ್ಠರೋಗಿಗಳೆಂದರೆ ಅವರಿಗೆ ಪಂಚಪ್ರಾಣ. ಈ ರೋಗಿಗಳು ಮನೆಗೆ ಬಂದರೆ ಎದ್ದು ಬಂದು ಅವರನ್ನು ಸ್ವಾಗತಿಸುತ್ತಾರೆ. ಆದರೆ ಕೆಲವು ರೋಗಿಗಳು ಕಾಲಿಲ್ಲದ ದೇಹವನ್ನು ದಬ್ಬಿಕೊಂಡು ಮನೆಯ ಮುಂದೆ ನಿಂತು ಕೂಗಿದರೆ ಏನುಬೇಕು ಎಂದು ಕೇಳಿ ಅವರಿಗೆ ಕ್ಷಣದಲ್ಲಿಯೇ ಬ್ರೆಡ್ ಮತ್ತು ಹಣ್ಣು ಕೊಡುತ್ತಾರೆ ಶ್ರೀ ಮಲ್ಲಪ್ಪನವರು ಈ ರೋಗಿಗಳನ್ನು ಆದರದಿಂದ ಕಾಣುವುದರಿಂದಾಗಿ ರೋಗಿಗಳು ಪ್ರತಿ ದಿನವೂ ಇವರನ್ನು ತಪ್ಪದೇ ಭೇಟಿಯಾಗುತ್ತಿದ್ದರು. ಅವರು ಡಾ!! ಸುಭಾಸಕರಣಗಿ (ವಡಗೇರಿ) ಇವರನ್ನು ಈ ರೋಗಿಗಳ ಸಂಬಂಧವಾಗಿ ಮದ್ರಾಸಿಗೆ ತರಬೇತಿಗೆ ಕಳುಹಿಸಿದರು ಎಂಬುದನ್ನು ಇಲ್ಲಿ ನೆನಸಬಹುದಾಗಿದೆ.

ಮಲ್ಲಪ್ಪನವರ ಪರಿಶ್ರಮದ ಫಲವಾಗಿ ಇಂದು ಯಾದಗಿರಿಯಲ್ಲಿ ಈ ರೋಗಿಗಳಿಗೆ ನೆಲೆ ಕಾಣುವಂತಾಗಿದೆ. ಅವರು ಈ ರೋಗದ ಬಗ್ಗೆ ಸಾಮಾನ್ಯ ಜನರಿಗೆ ತಿಳಿವಳಿಕೆ ನೀಡಲು ಇಚ್ಛಿಪಟ್ಟರು. ಅದಕ್ಕೆ ಸರ್ಕಾರದವರು ಶಾಲೆಯ ಮಕ್ಕಳನ್ನು ಪರೀಕ್ಷೆ ಮಾಡಿ ಈ ರೋಗ ಲಕ್ಷಣಗಳನ್ನು ಗುರುತಿಸಿ ಇದನ್ನು ತಡೆಗಟ್ಟಲು ಕ್ರಮ ಕೈಗೊಂಡಿದ್ದಾರೆ.

ಅವರು ಸುಮಾರು 1/2 ರಷ್ಟು ಜನ ಕುಷ್ಠರೋಗಿಗಳು ಭಾರತದಲ್ಲಿ ಇದ್ದಾರೆ. ಸರಕಾರವು ಇವರ ಸೇವೆಗಾಗಿ ವೈದ್ಯರನ್ನು ಸ್ವಯಂ ಸಂಘಗಳನ್ನು ಶಾಲಾ ಶಿಕ್ಷಕರನ್ನು ಗ್ರಾಮ ಪಂಚಾಯಿತಿಗಳನ್ನು

ಉಪಯೋಗಿಸಿಕೊಂಡು ಸಾರ್ವಜನಿಕರಲ್ಲಿ ತಿಳುವಳಿಕೆ ನೀಡಬೇಕು ಎಂದರು. ಕೊಲೂರು ಮಲ್ಲಪ್ಪನವರು ರಾಜ್ಯ ಮತ್ತು ಜಿಲ್ಲೆಗಳಲ್ಲಿ ಇದರ ಪ್ರಗತಿ ಅಷ್ಟಾಗೀ ಆಗಿಲ್ಲ ಎಂದು ಖೇದ ವ್ಯಕ್ತಪಡಿಸಿದರು. ಅವರು ಕೇಂದ್ರ ಅಧಿಕಾರಿಗಳು ರಾಜ್ಯಗಳಿಗೆ ಹೆಚ್ಚು ಭೇಟಿ ನೀಡಿ ಇದರ ಪರಿಶೀಲನೆ ನಡೆಸಬೇಕೆಂದರಲ್ಲದೆ ಮಲ್ಲಪ್ಪನವರು ಖಾದಿ ಮತ್ತು ಗ್ರಾಮ ಕೈಗಾರಿಕೆ ಕೇಂದ್ರದವರು ಈ ಕುರಿತು ಖಾದಿ ಮತ್ತು ಗ್ರಾಮ ಕೈಗಾರಿಕೆ ಅಧ್ಯಕ್ಷರನ್ನು ಕಂಡು ಚರ್ಚಿಸಿದರು.

ಕೊಲೂರು ಮಲ್ಲಪ್ಪನವರ ಕಾರ್ಯವನ್ನು ಶ್ಲಾಘಿಸುತ್ತಾ ರೋಗಿ ರಾಮಪ್ಪನವರು ಹೀಗೆ ಹೇಳುತ್ತಾರೆ "ನನಗೆ ತುಂಬಾ ಸಂಬಂಧಿಗಳಿದ್ದರು ಆದರೆ ನಾನು ಈಗ ಒಬ್ಬನೇ ಇದ್ದೇನೆ. ನನಗೆ ಯಾರು ಮುಟ್ಟುವುದಿಲ್ಲ. ಆದರೆ ನನಗೆ ಕೊಲೂರು ಮಲ್ಲಪ್ಪನವರು ಹೊಸ ಜೀವನ ನೀಡಿದ್ದಾರೆ ನಾನು ಭಿಕ್ಷೆ ಬೇಡುತ್ತಿದ್ದೆ ಒಂದು ದಿನ ಸ್ನೇಹಿತ ಕೊಲೂರು ಮಲ್ಲಪ್ಪನವರ ಬಗ್ಗೆ ತಿಳಿಸಿದ ನಾನು ಅವರನ್ನು ಭೇಟಿ ಆದಾಗ ಅವರು ತುಂಬಾ ಅಭಿಮಾನದಿಂದ ಮಾತನಾಡಿದರು. ನಾನು ಆಕ್ಷಣ ಮಲ್ಲಪ್ಪನವರನ್ನು ದೇವರೇ ನನ್ನ ಬಳಿ ಕಳುಹಿಸಿರಬಹುದು ಎಂದುಕೊಂಡೆ ನನಗೆ ಊಟ ಕೊಡುತ್ತಾರೆ".

ಇನ್ನೊಬ್ಬ ಕುಷ್ಠರೋಗಿ ಕೊಲೂರು ಮಲ್ಲಪ್ಪನವರನ್ನು ಕುರಿತು ಹೀಗೆ ಹೇಳುತ್ತಾನೆ. "ನಾನು ಅವರ ಮುಂದೆ ನಿಂತಾಗ ನಾನು ದೇವರ ಮುಂದೆ ನಿಂತ ಹಾಗೆ ಆಯಿತು ಇಂಥವರು ತುಂಬಾ ವಿರಳವಾಗಿ ಸಿಗುತ್ತಾರೆ, ಅವರು ಜನರಲ್ಲಿ ಕುಷ್ಠರೋಗದ ತಪ್ಪು ನಂಬಿಕೆಯನ್ನು ಹೋಗಲಾಡಿಸಿದರು. ಅವರು ಈ ರೋಗ ಒಂದು ಚರ್ಮರೋಗ ಇದನ್ನು ಉಪಚಾರದಿಂದ ಹೋಗಲಾಡಿಸಬಹುದು ಎಂದು ತಿಳಿಸಿದರು ಅವರು ಗೌತಮ ಬುದ್ಧನ, ಏಸುಕ್ರಿಸ್ತನ, ಮಹಾತ್ಮ ಬಸವೇಶ್ವರ."ಮಹಾತ್ಮಗಾಂಧಿ ತರಹ ಕೆಲಸ ಮಾಡಿದರು."

ಮಲ್ಲಪ್ಪನವರು ಮಾನವ ಕುಲಕ್ಕೆ ಸಲ್ಲಿಸಿದ ಸೇವೆ ಅಪಾರ. ಅವರೊಬ್ಬ ಧೀಮಂತನಾಯಕ ತಮ್ಮ ಜೀವನವನ್ನು ಸಮಾಜದ ಅಭಿವೃದ್ಧಿಗಾಗಿ ದೇಶದ ಏಳಿಗೆಗಾಗಿ ಮುಡುಪಾಗಿಟ್ಟರು ಅವರಿಟ್ಟ ಹೆಜ್ಜೆ ಮಾಡಿದ ಸೇವೆ ಸ್ಮರಣೀಯವಾದುದು. ಭಾರತ ಸ್ವಾತಂತ್ರ್ಯದ ಸಂದರ್ಭದಲ್ಲಿ ಸೃಜನಶೀಲ ವ್ಯಕ್ತಿಯಾಗಿ ಮಾಡಿದ ಸಾಧನೆ ಅಮೋಘವಾದುದು ಅವರ ವ್ಯಕ್ತಿತ್ವ ಹಿಡಿದಿಡಲು ಅಸಾಧ್ಯ ಅವರೊಬ್ಬ ಮುತ್ಸದ್ದಿ ರಾಜಕಾರಣಿಯಾಗಿ ಹೋರಾಟಗಾರನಾಗಿ ದಕ್ಷಿಣ ಭಾರತದ ಏಳಿಗೆಗಾಗಿ ಸಲ್ಲಿಸಿದ ಸೇವೆ ಕೊಲೂರು ಮಲ್ಲಪ್ಪನವರನ್ನು ಮಹಾನ್ ವ್ಯಕ್ತಿಗಳ ಶ್ರೇಣಿಯಲ್ಲಿ ಒಬ್ಬರನ್ನಾಗಿಸಿದೆ.

ಅವರು ಗ್ರಾಮೀಣ ಪ್ರದೇಶದ ಪರಿಸರದಲ್ಲಿ ಜನಿಸಿ ದೇಶಪ್ರೇಮ ಬೆಳೆಸುವುದರ ಜೊತೆಗೆ ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯವಾಗಿ ಭಾಗವಹಿಸಿದರು ವಿಶೇಷವಾಗಿ ಯುವಕರಲ್ಲಿ ಒಳ್ಳೆಯ ಹುಮ್ಮಸ್ಸು ತುಂಬುವ ಸದವಕಾಶ ಮಲ್ಲಪ್ಪನವರಿಗೆ ದಕ್ಕಿದೆ ನಿಜವಾಗಿಯೂ ಇದು ಹೆಮ್ಮೆಯ ವಿಷಯವೇ ಸರಿ ಬ್ರಿಟಿಷ್ ಸಾಮ್ರಾಜ್ಯದ ಎದುರು ಭಾರತೀಯ ಯುವಕರನ್ನು ಪ್ರಚೋದಿಸಿ ಸ್ವಾತಂತ್ರ್ಯ ಹೋರಾಟಕ್ಕೆ ಅಣಿಗೊಳಿಸಿದರಲ್ಲದೆ ನಮ್ಮ ದೇಶ ಮುಂದುವರೆಯಲು ಸವಾಲುಗಳನ್ನು ಎದುರಿಸಲು ಮಾತೃಭೂಮಿಯ ಸಲುವಾಗಿ ಏನೆಲ್ಲವನ್ನೂ ತ್ಯಾಗ ಮಾಡಲು ಯುವಕರನ್ನು ಹುರಿದುಂಬಿಸಿದರು.

ಕೊಲೂರು ಮಲ್ಲಪ್ಪನವರು ಈ ಭಾಗದ ಮಹಾನ್ ಮುಖಂಡರು ಅಷ್ಟೇ ಅಲ್ಲ ನಿಜಾಮ ದಬ್ಬಾಳಿಕೆಗೆ ಎದೆ ಕೊಟ್ಟು ನಿಂತ ಧೀರೋದಾತ್ತ ಅವರು ಅಷ್ಟೊಂದು ಶಿಕ್ಷಣ ಪಡೆದವರಲ್ಲ. ಹಿಂದುಳಿದ ವರ್ಗದಲ್ಲಿ ಜನಿಸಿದ್ದರೂ ಸಹಿತ ಗ್ರಾಮೀಣ ಪ್ರದೇಶದ ಸಮಗ್ರ ಅಧ್ಯಯನ ಮಾಡಿ ಅಲ್ಲಿನ ಕಷ್ಟ ಕಾರ್ಪಣ್ಯವನ್ನು ತೊಡೆದು ಹಾಕುವುದು ಅವರ ಮುಖ್ಯ ಉದ್ದೇಶವಾಗಿತ್ತು. ಅವರ ಧರ್ಮಪತ್ನಿ ಶ್ರೀಮತಿ ಶಂಕ್ರಮ್ಮನವರು ಅವರ ಜೀವನದಲ್ಲಿ ಸಾಕಷ್ಟು ಸಹಕಾರಿಯಾಗಿದ್ದರು. ಜಾಣೆಯಾಗಿದ್ದ ಅವರು ಮಲ್ಲಪ್ಪನವರನ್ನು ಒಂದು ಹಂತಕ್ಕೆ ಬರುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ನಿಜವಾಗಿಯೂ ಅವರ ಸೇವೆ ಅಮೋಘವಾದುದು. ಆದರೆ ಅವರೊಬ್ಬ ಸಾರ್ವಜನಿಕ ಸೇವಕರಾಗಿ ಸಮಾಜ ಸೇವೆ ಗೈಯಲು ತಮ್ಮ ಜೀವನವನ್ನು ಮುಡುಪಾಗಿಟ್ಟರು ಅವರ ಶ್ರೀಮತಿಯವರ ಬಗ್ಗೆ ಹೇಳಬೇಕಾದರೆ ತಮ್ಮ ಮನೆಯ ಕೆಲಸಗಳನ್ನು ಬದಿಗೊತ್ತಿ ದೇಶ ಸೇವೆಗೆ ಮಲ್ಲಪ್ಪನವರನ್ನು ಪ್ರಚೋದಿಸಿದ್ದು ಸಣ್ಣ ಮಾತಲ್ಲ! ಅವರ ಮನೆ ಅಂದು ದಾಸೋಹವಾಗಿ ಪರಿಣಮಿಸಿತ್ತು. ಅವರ ಮನೆಗೆ ಬರುವ ವ್ಯಕ್ತಿಗಳು ಅವರ ಮನೆಯ ಸದಸ್ಯರಂತೆ ಇರುತ್ತಿದ್ದರು ಶ್ರೀಮತಿಯವರ ಔದಾರ್ಯ ಎಲ್ಲಿಲ್ಲದ ಗಟ್ಟಿತನವನ್ನು ಮಲ್ಲಪ್ಪನವರಲ್ಲಿ ಮೂಡಿಸಿತ್ತು.

ಮಲ್ಲಪ್ಪನವರ ಕೊಡುಗೆ ನಿಜವಾಗಲು ಶ್ಲಾಘನೀಯ ವಿಶೇಷವಾಗಿ ನಿಜಾಮರ ವಿರುದ್ಧ ಹೋರಾಡಿ ಯಶಸ್ವಿನ ಪತಾಕೆ ಹಾರಿಸಿದರು ನಿಜಾಮರ ಸವಾಲುಗಳನ್ನು ಎದುರಿಸುವಲ್ಲಿಯ ಅವರ ಧೈರ್ಯ ಮೆಚ್ಚುವಂಥದ್ದು. ಒಬ್ಬ ಆದರ್ಶ ವಿಚಾರವಂತ ವ್ಯಕ್ತಿತ್ವವುಳ್ಳ ಮಲ್ಲಪ್ಪನವರು ಗಟ್ಟಿ ಮನಸ್ಸಿನ ಹೈದ್ರಾಬಾದ ಕರ್ನಾಟಕದ ಸ್ವಾತಂತ್ರ್ಯ ರೂವಾರಿ ಅಂದು ಹೈದ್ರಾಬಾದ್ ನಗರದ ಉರ್ದುಕವಿಗಳು ನೆಹರು ಮತ್ತು ಮಲ್ಲಪ್ಪನವರನ್ನು ಉದ್ದೇಶಿಸಿ ಹೀಗೆ ಹೇಳುತ್ತಿದ್ದರಂತೆ 'ಉತ್ತರ ಮೇ ಹೈ ನೆಹರು ದಖಿನ್ ಮೇ ಹೈ ಮಲ್ಲಪ್ಪ' ಈ ಹೇಳಿಕೆಯನ್ನು ನೋಡಿದಾಗ ಅವರ ವ್ಯಕ್ತಿತ್ವದ ಪರಿಚಯವಾಗುತ್ತದೆ.

ಶ್ರೀ ಕೊಲೂರು ಮಲ್ಲಪ್ಪನವರು ಹೈದ್ರಾಬಾದ ಕಾಂಗ್ರೆಸ್ ಕಮಿಟಿಗೆ ಮೇಲ್ವಿಚಾರಕರಾಗಿ ನಿರಾಶ್ರಿತ ಗಡಿ ಶಿಬಿರಾಧಿಪತಿಯಾಗಿ ನೇಮಕಗೊಂಡು ಅಷ್ಟೇ ಪ್ರಾಮಾಣಿಕತನದಿಂದ ಯಶಸ್ವಿಯಾದರು ಗಡಿ ಪ್ರದೇಶದ ನಾಯಕತ್ವವನ್ನು ವಹಿಸಿದ ಮಲ್ಲಪ್ಪನವರು ನಿಜಾಮ ತನ್ನ ಆಡಳಿತವನ್ನು ಭಾರತಕ್ಕೆ ಒಕ್ಕೂಟಕ್ಕೆ ವಿಲೀನ ಗೊಳಿಸುವಲ್ಲಿ ಇವರ ಸಾಧನೆ ಚರಿತ್ರಾರ್ಹವಾಗಿದೆ.

ಇತರ ಕಾಂಗ್ರೆಸ್ ಮುಖಂಡರಂತೆ ಅಧಿಕಾರ ದಾಹಕ್ಕೆ ಆಸೆಪಡದೆ ಅಧಿಕಾರದಿಂದ ದೂರ ಉಳಿದ ಅವರ ವ್ಯಕ್ತಿತ್ವ ಮಾರ್ಗದರ್ಶಕವೆಂದೇ ಹೇಳಬೇಕು ಪರಿಶುದ್ಧ ನಡತೆ ನೇರ ನಡೆ ನುಡಿ ಎಲ್ಲರೂ ಸಮಾನರು ಎಂಬ ಭಾವನೆ ಮಲ್ಲಪ್ಪನವರ ವ್ಯಕ್ತಿತ್ವವನ್ನು ಉನ್ನತೀಕರಿಸಿವೆ. ಅವರು ರಾಜ್ಯ ಸಭಾ ಸದಸ್ಯರಾದ ನಂತರ ಹಿಂದುಳಿದ ಮತ್ತು ಬುಡಕಟ್ಟು ಜನಾಂಗಕ್ಕೆ ಅಮೋಘ ಸೇವೆ ಗೈದರು ಸಮಾಜದಲ್ಲಿ ಅತಿ ಕೆಳವರ್ಗದ ಜನರ ಸೇವೆ ಗೈಯಲು ಮಲ್ಲಪ್ಪನವರಿಗೆ ಒಂದು ಒಳ್ಳೆಯ ಅವಕಾಶ ಲಭಿಸಿತು ಕುಷ್ಠರೋಗ ನಿವಾರಣೆಯ ಮೂಲ ಉದ್ದೇಶ ಮಲ್ಲಪ್ಪನವರಿಗೆ

ಒಂದು ಒಳ್ಳೆಯ ಅವಕಾಶ ಲಭಿಸಿತು ಕುಷ್ಠರೋಗ ನಿವಾರಣೆಯ ಮೂಲ ಉದ್ದೇಶ ಮಲ್ಲಪ್ಪನವರದಾಗಿದ ಶ್ರೀಮತಿ ಇಂದಿರಾಗಾಂಧಿಯವರ ಇಪ್ಪತ್ತು ಅಂಶಗಳ ಕಾರ್ಯಕ್ರಮದಲ್ಲಿ ಮಲ್ಲಪ್ಪನವರ ಕೊಡುಗೆ ಮಹತ್ವದ್ದು ಶಿಸ್ತು ಗಾಂಧಿ ತತ್ವ ಅವರ ಜೀವನದಲ್ಲಿ ಹಾಸು ಹೊಕ್ಕಾಗಿ ಬೆಳೆಸಿಕೊಂಡಿದ್ದಾರೆ ಕುಷ್ಟರೋಗದಿಂದ ಬಳಲುತ್ತಿದ್ದ ಜನರನ್ನು ಸಂಪೂರ್ಣವಾಗಿ ಗುಣಮುಖರನ್ನಾಗಿಸಿ ಸಮಾಜದಲ್ಲಿ ಅವರಿಗೆ ಬೆಳಕು ಕೊಡುವ ಉದ್ದೇಶ ಮಲ್ಲಪ್ಪನವರಿಗಿದೆ ಆ ದಿಶೆಯಲ್ಲಿ ಮಲ್ಲಪ್ಪಪನವರು ಅವಿರತವಾಗಿ ಶ್ರಮಿಸಿದರು.

ಉಣ್ಣೆ ಕೈಗಾರಿಕೆ ಕ್ಷೇತ್ರದಲ್ಲಿ ಅವರ ಕೊಡುಗೆ ಗಮನಾರ್ಹವಾಗಿದೆ ಅದರ ಸದಸ್ಯರಾಗಿ ಭಾರತದ ತುಂಬೆಲ್ಲಾ ಸಂಚರಿಸಿ ಅದಕ್ಕೆ ಸೂಕ್ತವಾದ ಭವಿಷ್ಯ ಕೊಡುವ ಬಗ್ಗೆ ಕೊಲೂರು ಚಿಂತಿಸಿದರು ಅದರ ನಿಮಿತ್ತವಾಗಿ ಕರ್ನಾಟಕದಲ್ಲಿ ವಿಶೇಷವಾಗಿ ಬೆಂಗಳೂರಿನಲ್ಲಿ ಉಣ್ಣೆ ನೇಕಾರರ ಸಹಕಾರ ಸಂಘಗಳ ಸಮಾವೇಶ 1958 ರಲ್ಲಿ ಕರೆದಿದ್ದರು ಇದು ಮಹತ್ವ ಪೂರ್ಣ ಸಮ್ಮೇಳನವೆನಿಸಿ ಅವರ ವಿಶಿಷ್ಟ ಕೊಡುಗೆ ಎನಿಸಿದೆ ಅಷ್ಟೇ ಅಲ್ಲ ಇದು ನಿಜವಾಗಿಯೂ ನೆನಪಿಸುವ ಸಂಗತಿಯಾಗಿದೆ.

ಸಾರ್ವಜನಿಕ ಜೀವನದಲ್ಲಿ ಪನೆಲ್ಲವನ್ನು ಸಾಧಿಸಿ 65ನೇ ವಾರ್ಷಿಕ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸಂಘಟಿಸಲು ಮುಂದಾದರು ಈ ಅಧಿವೇಶನವನ್ನು ಇಂದೂ ಸಹಿತ ನಾವು ನೆನಪಿಡುತ್ತೇವೆ ಅಷ್ಟೇ ಅಲ್ಲ ಇತಿಹಾಸದ ಪುಟಗಳಲ್ಲಿ ಇದೊಂದು ಮೈಲಿಗಲ್ಲಾಗಿದೆ ಇಂದೂ ಅವರು ನಮ್ಮೊಂದಿಗೆ ಇದ್ದಾರೆ ಸ್ವಾತಂತ್ರ್ಯ ಭಾರತದ ಸಾಧನೆಯನ್ನು ನೋಡಿ ಸಂತೋಷ ಪಟ್ಟಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಕಲುಷಿತ ರಾಜಕೀಯ ವಾತಾವರಣ ಮಲ್ಲಪ್ಪನವರ ಮನಸ್ಸಿಗೆ ನೋವು ತರಿಸಿದೆ ಮುಂದಿನ ಭವ್ಯ ಭಾರತ ನವಯುವಕರ ಕೈಯಲ್ಲಿ ಇದೆ ಎನ್ನುವುರಲ್ಲಿ ಮಲ್ಲಪ್ಪನವರು ದೃಢ ನಂಬಿಕೆಯಿಟ್ಟಿದ್ದಾರೆ.

ಅವರ ಆದರ್ಶ ಸಂದೇಶ ನಮ್ಮ ಯುವಕರಲ್ಲಿ ಮೈಗೂಡಿಸಿ ಕೊಳ್ಳುವಂತೆ ತಿಳಿಸಿದ್ದಾರಲ್ಲದೆ ಅವರು ನಮ್ಮ ಮುಂದಿನ ಭಾವಿ ಜೀವನಕ್ಕು ಉಪಯೋಗವಾಗುವ ಮಾದರಿಯಾಗಿದ್ದಾರೆ ಅವರು ನವಯುವಕರಿಗೆ ಸಮೃದ್ಧ ಭಾರತದ ಬುನಾದಿ ಯಾವ ರೀತಿ ಕಟ್ಟಬೇಕು ಎನ್ನುವ ವಿಚಾರ ಸ್ಪಷ್ಟ ಪಡಿಸಿದ್ದಾರೆ ಇಂದಿನ ಯುವಕರೇ ನಾಳಿನ ನಾಗರಿಕರು ಎಂಬ ವಿಚಾರದಲ್ಲಿ ಅಚಲ ನಂಬಿಕೆ ಇಟ್ಟ ಮಲ್ಲಪ್ಪನವರ ವ್ಯಕ್ತಿತ್ವ ಹಾಗೂ ತಾಯ್ನಾಡಿನ ಶ್ರದ್ಧೆ ಅಪಾರ ಹೀಗಾಗಿ ಇಂದಿನ ಯುವ ಜನತೆ ಅವರು ಹಾಕಿಕೊಟ್ಟ ಮಾರ್ಗದಲ್ಲಿ ನಡೆದರೆ ಭಾರತದ ಏಳ್ಗೆ ಸಾಧ್ಯವೆನ್ನುವುದರಲ್ಲಿ ಎರಡುಮಾತಿಲ್ಲ.

ಓದಿದ ಫಲ ಕೂಚಭಟ್ಟನಂತಾಗಬಾರದು.
ಓದಿದ ಫಲ ಪರಾಶರನಂತಾಗಬಾರದು.
ಓದಿದ ಫಲ ಮಯೂರನಂತಾಗ ಬಾರದು,
ಓದಿದ ಫಲ ನಮ್ಮ ಹಾವಿನಹಾಳ ಕಲ್ಲಯ್ಯನ
ಮನೆಯ ಶ್ವಾನದಂತಾಗಬೇಕು ಕಾಣಾ
ಕಪಿಲ ಸಿದ್ಧಮಲ್ಲಿಕಾರ್ಜುನಾ

- ಸಿದ್ಧರಾಮೇಶ್ವರ

# ಬಜೆಟ್ ಮೇಲಿನ ಸಾಮಾನ್ಯ ಚರ್ಚೆ

18 ಜೂನ್ 1952

ಈ ವರ್ಷದ ಬಜೆಟ್ ಮೇಲಿನ ಸಾಮಾನ್ಯ ಚರ್ಚೆಯಲ್ಲಿ ಬಹಳಷ್ಟು ಜನರು ಮಾತನಾಡಿದ್ದಾರೆ. ವಿರೋಧ ಪಕ್ಷದ ಕೆಲವು ಗೌರವಾನ್ವಿತ ಸದಸ್ಯರು ಬಜೆಟ್ ವಿಷಯದ ಮೇಲೆ ಏನೂ ಚರ್ಚೆ ಮಾಡುತ್ತಿದ್ದಾರೆ. ಅವರು ಈ ಬಜೆಟ್‌ಗೆ ಲ್ಯಾಂಡ್‌ಲಾರ್ಡ್ ಮತ್ತು ಪೋಲೀಸ್ ಬಜೆಟ್ ಎಂದು ಹೇಳಿದ್ದಾರೆ. ಮತ್ತು ಜನರ ಮೇಲೆ ತೆರಿಗೆ ಹೆಚ್ಚಿಸಿದ್ದಾರೆ. ಈ ಬಗ್ಗೆ ಅವರು ವಿರೋಧ ವ್ಯಕ್ತಪಡಿಸಿದ್ದಾರೆ. ಈ ಎರಡು ಪ್ರಮುಖ ಚರ್ಚೆಯಾಗಿವೆ. ಇದರಿಂದ ಅವರ ವಿಚಾರಗಳು ನಮಗೆ ತಿಳಿದುಬರುತ್ತವೆ.

ಈ ಬಗ್ಗೆ ನಾನು ಹೇಳುವುದೇನೆಂದರೆ ಅವರು ಲ್ಯಾಂಡ್‌ಲಾರ್ಡ ಮತ್ತು ಪೋಲೀಸ್ ಬಜೆಟ್ ಎಂದು ಹೇಳುತ್ತಾರೆಯೋ ಅವರು ಕೂಡ ಅದೇ ಕ್ಷೇತ್ರದವರು ಇರುತ್ತಾರೆ. ಆ ಕ್ಷೇತ್ರದವರು ಪೋಲೀಸ್ ಬಜೆಟ್ ಕಡಿಮೆ ಮಾಡಬಾರದೆಂದು ಹೇಳುತ್ತಾರೆ. ನನ್ನ ವಿಚಾರದಲ್ಲಿ ನಮ್ಮ ಪಾರ್ಟಿಯ ಸರ್ಕಾರವಿರಲೀ ಅಥವಾ ಬೇರೆ ಪಕ್ಷದ ಸರ್ಕಾರವಿರಲೀ ಎಲ್ಲಿಯವರೆಗ ಗ್ಯಾರಂಟಿ ಶಾಂತಿ ಸಿಗುವುದಿಲ್ಲ. ಅವರೆಗೆ ಪೋಲಿಸ್ ಖರ್ಚು ಕಡಿಮೆ ಮಾಡಬಾರದು. ಒಂದು ವೇಳೆ ಪೋಲಿಸ್ ಖರ್ಚು ಕಡಿಮೆ ಮಾಡಿದರೆ ನಮ್ಮ ದೇಶದ ಶಾಂತಿಗೆ ಭಂಗ ಬರುತ್ತದೆ. ಮಾನ್ಯ ಗೌರವಾನ್ವಿತ ಮುಖ್ಯ ಮಂತ್ರಿಗಳು ಹಾಗೂ ಹಣಕಾಸು ಸಚಿವರು ಅನ್ನುತ್ತಾರೆ. ಒಂದು ವೇಳೆ ಸರ್ಕಾರವು ಪೋಲಿಸ್ ಇಲಾಖೆಯನ್ನು ತೆಗೆದು ಹಾಕಿದರೆ ನಮ್ಮ ದೇಶದಲ್ಲಿ ಶಾಂತಿ ಸ್ಥಾಪನೆಯಾಗಬೇಕಾದರೆ ಪೋಲಿಸ್ ಖರ್ಚನ್ನು ಕಡಿಮೆ ಮಾಡಬಾರದು.

ಒಂದು ವೇಳೆ ಸರ್ಕಾರವು ಪೋಲಿಸ್ ಇಲಾಖೆಯನ್ನು ತೆಗೆದುಹಾಕಿದರ ಸರ್ಕಾರದ ಆಡಳಿತ ಅಂತ್ಯಗೊಳ್ಳುತ್ತದೆ. ಕರ್ನಾಟಕ ಪ್ರದೇಶವಾಗಲೀ ಅಥವಾ ಮಹಾರಾಷ್ಟ್ರ ಪ್ರದೇಶವಾಗಲೀ ಈ ಪ್ರದೇಶದಲ್ಲಿ ಈ ತರಹದ ವೇದಿಕೆ ಬಂದಿಲ್ಲ. ನಮ್ಮಲ್ಲಿ ಪೋಲಿಸ್ ಚೌಕಿಗಳು ಬಹಳ ಇರುತ್ತವೆ. ಪೋಲಿಸ್ ಅಧಿಕಾರಿಗಳು ಬಹಳ ಇದ್ದಾರೆ. ಅವರನ್ನು ಕಡಿಮೆ ಮಾಡಬೇಕು. ಈ ಬಗ್ಗೆ ಯಾರು ಮಾತನಾಡಲಿಲ್ಲ. ಇದರರ್ಥವೇನೆಂದರೆ ಯಾವ ಪ್ರದೇಶದಲ್ಲಿ ಬಹಳ ತೊಂದರೆಗಳಿವೆ, ಸಮಸ್ಯೆಗಳಿವೆ. ಅಂತಲ್ಲಿ ಸರ್ಕಾರ ಅವುಗಳನ್ನು ಸರಿಪಡಿಸುವ ಕುರಿತು ವಿಚಾರ ಮಾಡುತ್ತದೆ. ಅಂತಹ ಸ್ಥಳಗಳಲ್ಲಿ ಸೂಕ್ತ ರೀತಿಯ ಬಂದೋಬಸ್ತ್ (ರಕ್ಷಣೆ) ಮಾಡುತ್ತದೆ.

ಈ ವಿಷಯದಲ್ಲಿ ನನ್ನ ಅಭಿಪ್ರಾಯವೇನೆಂದರೆ ಎಲ್ಲಿಯವರೆಗೆ ಶಾಂತಿ ಸ್ಥಾಪನೆ ಆಗುವುದಿಲ್ಲವೋ ನಮಗೆ ಈ ವಿಷಯದಲ್ಲಿ ಭರವಸೆ ಬರುವುದಿಲ್ಲವೋ ಅಲ್ಲಿಯವರೆಗೆ ಖರ್ಚು ಮಾಡಬಾರದು. ಆದರೆ ಪರಿಸ್ಥಿತಿ ಹಾಗೆ ಇರದೇ ಇರುವುದರಿಂದ ಪೋಲಿಸ್‌ಗೆ ಮಾಡುವ ಖರ್ಚು ಮಾಡಬೇಕು.

ನಮ್ಮ ದೇಶದಲ್ಲಿ ನಿರುದ್ಯೋಗ ಬಹಳವಿದೆಯೆಂದು ತಿಳಿದುಬಂದಿದೆ. ಈ ಬಗ್ಗೆ ವಿಚಾರ ಮಾಡಿದರೆ ಇದಕ್ಕೆ ಕಾರಣವೇನೆಂದರೆ ನಮ್ಮ ದೇಶದಲ್ಲಿ ಉದ್ದಿಮೆಗಳು ಬಹಳ ಕಡಿಮೆ ಇವೆ. ಹೀಗಾಗಿ ನಿರುದ್ಯೋಗ ಸಮಸ್ಯೆ ನಮ್ಮ ದೇಶದಲ್ಲಿ ದಿನದಿಂದ ದಿನಕ್ಕೆ ಉದ್ಭವಗೊಳ್ಳುತ್ತಾ ಹೋಗಿದೆ. ಕಾರಣ ಆದಷ್ಟು ಉದ್ದಿಮೆಗಳನ್ನು ಸ್ಥಾಪನೆ ಮಾಡಿದ್ದಾದರೆ ಈ ನಿರುದ್ಯೋಗ ಸಮಸ್ಯೆಯನ್ನು ನಮ್ಮ ದೇಶದಲ್ಲಿ ಇತ್ಯರ್ಥಗೊಳಿಸಬಹುದು. ಈ ವರ್ಷ ವಸತಿ ಸೌಲಭ್ಯಕ್ಕಾಗಿ ಹಣಕಾಸು ಸಚಿವರು ಬಜೆಟ್‌ನಲ್ಲಿ 10 ಲಕ್ಷ ರೂಪಾಯಿ ತೆಗದಿರಿಸಿದ್ದಾರೆ. ಕಳೆದ ವರ್ಷ ಭಾರತ ಸರ್ಕಾರ 20 ಲಕ್ಷ ರೂಪಾಯಿ ಈ ಸಂಬಂಧವಾಗಿ ಕೊಡುತ್ತೇವೆಂದು ವಾಗ್ದಾನ ಮಾಡಿದ್ದರು. ಆದರೆ ಆ ಹಣ ನಮ್ಮ ಕೈಸೇರಲಿಲ್ಲ. ಕಳೆದ ವರ್ಷ ನಮ್ಮ ರಾಜ್ಯ ಸರ್ಕಾರ ಈ ಸಂಬಂಧಯಾವ ಹಣವನ್ನು ಬಜೆಟ್‌ನಲ್ಲಿ ತೆಗೆದಿರಿಸಲಿಲ್ಲ. ಕಾರಣ ಭಾರತ ಸರ್ಕಾರದಿಂದ ನಮ್ಮ ಬರತಕ್ಕ, ಕೊಡುವ ಹಣವು ನಮಗೆ ಸಿಗಲಿಲ್ಲ. ಕಾರಣ ನಾನು ನಮ್ಮ ರಾಜ್ಯ ಸರ್ಕಾರಕ್ಕೆ ಈ ವಿಷಯದಲ್ಲಿ ಗಮನ ಸೆಳೆಯಲು ಇಚ್ಛಿಸುತ್ತೇನೆ. ಇದರಲ್ಲಿ ಕಾರ್ಮಿಕರ ಸಮಸ್ಯೆಯನ್ನು ಇತ್ಯರ್ಥಗೊಳಿಸಲು ಅವಶ್ಯವಿದೆ ಹಾಗೂ ಕಡ್ಡಾಯ ಶಿಕ್ಷಣ ಕುರಿತು ಸರ್ಕಾರ ಗಮನ ಹರಿಸಬೇಕು. ಒಂದೇ ತಾಲ್ಲೂಕನ್ನು ಆಯ್ಕೆಗೊಳಿಸಿ ಅದನ್ನು ಪ್ರಯೋಗಕ್ಕೆ ಒಳಪಡಿಸಿ ಅದರ ಪ್ರತಿಫಲವನ್ನು ಕಂಡುಕೊಳ್ಳಬೇಕು.

## ಅರಣ್ಯ ಇಲಾಖೆ ಕುರಿತು

ಈ ವಿಷಯದ ಬಗ್ಗೆ ಯಾರು ಗಮನ ಹರಿಸುವುದಿಲ್ಲ. ಜನರಾಗಲೀ ಅಥವಾ ಸರ್ಕಾರವಾಗಲೀ ಗಮನಹರಿಸುವುದಿಲ್ಲ. ಅರಣ್ಯದಲ್ಲಿ ಸಾವಿರಾರು ಗಿಡಗಳನ್ನು ಪ್ರತಿದಿನ ಕಡಿದು ಹಾಕುತ್ತಾರೆ. ರಸ್ತೆಯ ಅನುಕೂಲಕ್ಕಾಗಿ ಗಿಡಮರಗಳನ್ನು ಕಡಿದು ಹಾಕುತ್ತಾರೆ. ಸ್ವಾರ್ಥಿ ಜನರು ವಿನಾಕಾರಣ ಅರಣ್ಯವನ್ನು ನಾಶಗೊಳಿಸುತ್ತಾರೆ. ರಾಜಕೀಯ ಪಕ್ಷದ ಕರ್ತವ್ಯ ಈ ಕುರಿತು ಇಲ್ಲವೆ? ಇದು ರಾಷ್ಟ್ರದ ಸಂಪತ್ತು ಹಾಳಾದಂತಲ್ಲವೆ? ಆದ್ದರಿಂದ ಈ ಕಡೆ ಎಲ್ಲರೂ ಗಮನಹರಿಸಬೇಕು. ಈ ವಿಷಯಲ್ಲಿ ಸರ್ಕಾರದವರು ಏನೂ ಕ್ರಮ ತೆಗೆದುಕೊಂಡರೆ ಎಲ್ಲರೂ ಸರ್ಕಾರಕ್ಕೆ ಸಹಕಾರ ಕೊಡುತ್ತಾರೆ.

## ಗುಡಿ ಕೈಗಾರಿಕೆ ಕುರಿತು

ನಾನು ಈಗ ಗುಡಿ ಕೈಗಾರಿಕೆಯ ಬಗ್ಗೆ ಹೇಳಲು ಇಚ್ಛಿಸುತ್ತೇನೆ. ಹೈದರಾಬಾದಲ್ಲಿಯ 'ಮುಸಿರಾಬಾದ್' ನಲ್ಲಿ ಗುಡಿ ಕೈಗಾರಿಕೆ ಕುರಿತು ವಸ್ತು ಪ್ರದರ್ಶನಾಲಯ ಮಾಡಿದ್ದಾರೆ. ನಾನು ಅದನ್ನು ಸವಿಸ್ತಾರವಾಗಿ ಪರಿಶೀಲಿಸಿ ನೋಡಿದ ನಂತರ ನನಗೆ ಅನ್ನಿಸುವುದೆಂದರೆ ಸರ್ಕಾರ ಈ ವಿಷಯದ ಬಗ್ಗೆ ಎಷ್ಟು ಕೆಲಸ ಮಾಡಿದ್ದರೂ ಅತೃಪ್ತಿಕರವಾಗಿದೆ. ಇದನ್ನು ಪುನರ್ ಸಂಘಟಿಸಬೇಕು.

ಇದರಲ್ಲಿ ನಾನು ಒಂದು ಕೈಗಾರಿಕಾ ಅಂದರೆ ಕಂಬಳಿ ಗುಡಿ ಕೈಗಾರಿಕೆ ಬಗ್ಗೆ ಹೇಳಲು ಬಯಸುತ್ತೇನೆ. ಇದು ಕುರುಬ ಸಮಾಜದ ಕೈಗಾರಿಕೆ ಇದೆ. ಇದರಿಂದ ಅವರ ಉಪ ಜೀವನಕ್ಕೆ ನೆರವು ಸಿಗುತ್ತದೆ. ಆದರೆ ಕೈಗಾರಿಕೆಯಲ್ಲಿ ಬೇರೆ ಜನರಿಗೆ ದಿನಗೂಲಿ ಮೇಲೆ ಕೆಲಸಕ್ಕೆ ತೆಗೆದುಕೊಳ್ಳುತ್ತಾರೆ. ಆದರೆ ಅವರು ತಮ್ಮ ಕೂಲಿ ಸಲುವಾಗಿ ಕಾರ್ಯನಿರ್ವಹಿಸುತ್ತಾರೆ. ಇದರಿಂದ ಕೈಗಾರಿಕೆ ಅಭಿವೃದ್ಧಿ ಹೊಂದುವುದಿಲ್ಲ. ಒಂದು ವೇಳೆ ನಾವು ವಾಸ್ತವಿಕವಾಗಿ ಈ ಗುಡಿಕೈಗಾರಿಕೆಯು ಸಂಬಂಧಪಟ್ಟ ಜನರಿಗೆ ಕೆಲಸಕೊಟ್ಟರೆ ಈ ಕೈಗಾರಿಕೆ ಅಭಿವೃದ್ಧಿ ಹೊಂದುತ್ತದೆ. ಆದರೆ ಸರ್ಕಾರ ಈ ವಿಷಯದಲ್ಲಿ ಗಮನ ಹರಿಸುವುದಿಲ್ಲ. ಈ ಬಗ್ಗೆ ಗಮನಹರಿಸಬೇಕೆಂದು ಸರ್ಕಾರಕ್ಕೆ ವಿನಂತಿಸುತ್ತೇನೆ.

# ಸರ್ಕಾರೇತರ ಗೊತ್ತುವಳಿ ಮೇಲಿನ ಚರ್ಚೆ

1 ಫೆಬ್ರವರಿ 1952

ಈಗ ನಮ್ಮ ಮುಂದೆ ಏನೂ ಗೊತ್ತುವಳಿ ಬಂದಿದೆ ಅದರ ಮೇಲೆ ಗಂಭೀರವಾಗಿ ವಿಚಾರ ಮಾಡತಕ್ಕದ್ದು. ಈ ವಿಷಯದಲ್ಲಿ ಬಹಳಷ್ಟು ಭಾಗಗಳಿವೆ. ಇದು ಗಮನಿಸತಕ್ಕದ್ದು. ಜನರ ಹಿತದೃಷ್ಟಿಯಿಂದ ಇರುವುದಿಲ್ಲವೆಂದು ಭಾವಿಸಬಾರದು. ನಮ್ಮಲ್ಲಿ ಕೆಲವೊಂದು ಕಾಯಿದೆಗಳಿವೆ. ಅದರ ಮೇಲೆ ಸರ್ಕಾರದ ಗಮನ ತೆಗೆದುಕೊಳ್ಳಬೇಕು. Employees Insurance-Act 1948 ಇಸ್ವಿಯಲ್ಲಿ ಪಾಸಾಗಿದೆ. ಮತ್ತು ಕೆಲವು ರಾಜ್ಯಗಳಲ್ಲಿ ಈ ಆ್ಯಕ್ಟ್ ಕಾರ್ಯಗತಕ್ಕೆ ಬಂದಿರುತ್ತದೆ. ಕಾರ್ಮಿಕರ ಮುಂದಿನ ಜೀವನದ ಮೇಲೆ ಈ ಕಾಯಿದೆಗಳು ಪ್ರಭಾವ ಬೀರುತ್ತವೆ.

ಕಾರಣ ನಾನು ಗೌರವಾನ್ವಿತ ಮಂತ್ರಿಗಳು ಹಾಗೂ ಸರ್ಕಾರಕ್ಕೆ ಕೇಳುವುದೇನೆಂದರೆ ಈ ವಿಷಯದ ಕಡೆ ಗಮನ ಹರಿಸಬೇಕು. ಈ Employees Insurance Actನ್ನು ಹೈದ್ರಾಬಾದ್ ರಾಜ್ಯಲ್ಲಿಯೂ ಕಾರ್ಯರೂಪಕ್ಕೆ ತರಬೇಕು. ಇನ್ನೊಂದು ವಿಷಯವೆನೆಂದರೆ 'ರೆಗೇಕ್ ಕಮಿಟಿ'ಯ ವರದಿಯಂತೆ ಅವರು ತಮ್ಮ ಫ್ಯಾಕ್ಟರಿ ವಿಷಯಕ್ಕೆ ಸಿಮಿತಗೊಳಿಸಿ ಕಾರ್ಯರೂಪಕ್ಕೆ ತಂದಿದ್ದಾರೆ. ಆದರೆ ಬೇರೆ ಖಾಸಗಿ ಫ್ಯಾಕ್ಟರಿಗಳೂ ಕೂಡ ಇದನ್ನು ಉಪಯೋಗಿಸಿಕೊಳ್ಳಬೇಕು. ಈ ಆ್ಯಕ್ಟನಲ್ಲಿ ಕಾರ್ಮಿಕರಿಗೆ ಒಂದು ತಿಂಗಳದ ರಜಾ ಕೊಡಬೇಕೆಂದು ನಿರ್ಣಯ ಮಾಡಿದ್ದಾರೆ.

ಇವತ್ತು ಬೇರೆ ಕಾರ್ಮಿಕರಿಗೆ ಬಹಳಷ್ಟು ಸೌಲತ್ತು ಕೊಟ್ಟಿದ್ದಾರೆ. ಬೇರೆಯವರ ಬಾಬತ್ತು ಈ ಸೌಕರ್ಯಗಳನ್ನು ಕೊಡಬೇಕೆಂದು ವಿಚಾರಿಸಬೇಕು. ನಾವು ಒಂದು ತಿಂಗಳ ರಜೆ ಮಂಜೂರು ಮಾಡಬಹುದು. ಆದರೆ ಬೇರೆ ರಾಜ್ಯಗಳಲ್ಲಿ ಈ ಸೌಲತ್ತುಗಳು ಕೊಡುತ್ತಾರೆಯೆ? ಅಲ್ಲಿ ಈ ತರಹದ ಸೌಲತ್ತುಗಳು ಇರುವುದಿಲ್ಲ. ನಾವು ಒಂದು ವೇಳೆ ಈ ತರಹ ಮಾಡಿದರೆ ನಮ್ಮ ಉದ್ದಿಮೆಗಳ ಮೇಲೆ ಇದರ ಪ್ರಭಾವ ಬೀಳುತ್ತೆ. ನಮ್ಮ ಉದ್ದಿಮೆ ಉತ್ಪಾದನೆಯ ಮೇಲೆ ಇದರ ಪ್ರಭಾವ ಬೀರುತ್ತದೆಯೆ? ಅವರ ಬೆಲೆ ಹೆಚ್ಚಳವಾಗುತ್ತವೆ. ಹಾಗಾಗಿ ನಮ್ಮ ಉದ್ದಿಮೆಗಳ ಮೇಲೆ ದುಷ್ಪರಿಣಾಮವಾಗಿ ಅವನತಿ ಹೊಂದುತ್ತವೆ.

ವ್ಯಾಪಾರವು ಒಂದೊಂದು ಪೈಸೆ ಲೆಕ್ಕದ ಮೇಲೆ ನಡೆಯುತ್ತದೆ. ಹೀಗಾಗಿ ಬೇರೆಯವರನ್ನು ನಮಗಿಂತ ಮುಂದೆ ಹೋಗಬಹುದು. ಈ ಬಗ್ಗೆ ವಿಚಾರ ಮಾಡಿ ನಮ್ಮ ಕಡೆ 10 ದಿನದ ರಜೆ ಕೊಡುತ್ತಾರೆ. ನಮ್ಮ ಹತ್ತಿರದ ರಾಜ್ಯಗಳಲ್ಲಿ ಕೂಡಾ ಇದೇ ರೀತಿ ಇದೆ. ಒಂದು ವೇಳೆ ಆ ರಾಜ್ಯಗಳಲ್ಲಿ ಈ ವಿಷಯದ ಬಗ್ಗೆ ನಿರ್ಣಯ ಮಾಡಿದ್ದರೆ ಅದನ್ನು ನಾವು ಕೂಡ ಮಾಡಬಹುದು.

ಇನ್ನೊಂದು ವಿಷಯ ನಾನು ಹೇಳಬಯಸುವುದೇನೆಂದರೆ ತುಟ್ಟಿಭತ್ಯೆ ಈ ವಿಷಯ ಕೂಡಾ ಅಖಿಲಭಾರತ ವಿಷಯವಾಗಿದೆ. ಇದು ಕೇವಲ ಹೈದ್ರಾಬಾದ ವಿಷಯವಲ್ಲ. ಭಾರತದ ಬೇರ

ಕಾರ್ಖಾನೆಗಳಲ್ಲಿ ಹೇಗೆ ಮಾಡುತ್ತಾರೆ. ಅದನ್ನು ನೋಡಿ ನಾವು ಕೂಡ ಮಾಡಬಹುದು. ಕೆಲವು ಗೌರವಾನ್ವಿತ ಸದಸ್ಯರೂ ಕೂಡ ಇದನ್ನು ಒಪ್ಪುತ್ತಾರೆ. ಮತ್ತು ಕೃಷಿ ಕಾರ್ಮಿಕ ಪರಿಸ್ಥಿತಿ ಬಹಳ ಕೆಟ್ಟಿದೆ ಎಂದು ಹೇಳುತ್ತಾರೆ. ಇದನ್ನು ಸರಿಪಡಿಸಬೇಕೆಂಬ ಅವಶ್ಯಕತೆ ಇದೆ.

ಇದರಲ್ಲಿ ಯಾವ ಸಂಶಯವಿಲ್ಲ. ರೈತರ ಪರಿಸ್ಥಿತಿ ಬಹಳಷ್ಟು ಕೆಟ್ಟಿದೆ. ಆದರೆ ನೀವು ಇದರಲ್ಲಿ ಗಮನ ಹರಿಸಿರಿ. ರೈತರು ಯೋಗ್ಯವಾಗಿದ್ದಾರೆಯೇ? ಅವರ ಪರಿಸ್ಥಿತಿಯನ್ನು ಸುಧಾರಿಸಬೇಕಾಗಿದೆ. ನನಗೆ ಭಯವಿದೆ. ಒಂದು ಸಮಸ್ಯೆಯನ್ನು ಪರಿಹರಿಸಲು ಹೋದಾಗ ಇನ್ನೊಂದು ಸಮಸ್ಯೆ ಉದ್ಭವವಾಗಿ ಪ್ರಸ್ತುತವಾಗಿದ್ದ ಸೌಲತ್ತು ಕಾರ್ಮಿಕರಿಗೆ ಮತ್ತು ರೈತರಿಗೆ ಸಿಗುವಂತ ಸೌಲತ್ತುಗಳು ಇವು ಕೂಡ ಕಳೆದುಕೊಳ್ಳುತ್ತಾರೆ. ಇದನ್ನು ಗೌರವಾನ್ವಿತ ಮುಖ್ಯ ಮಂತ್ರಿಗಳು ಕೂಡ ಹೇಳಿದ್ದಾರೆ.

ಕಾರಣ, ನಾನು ಈಗ ಹೇಳಬಯಸುವುದೇನೆಂದರೆ ಕೃಷಿ ಕಾರ್ಮಿಕರ ಪೈಕಿ ಯಾವುದೇ ಕ್ರಮ ತೆಗೆದುಕೊಳ್ಳಬೇಕಾದರೆ ಬಹಳ ವಿಚಾರಮಾಡಿ ತೆಗೆದುಕೊಳ್ಳಬೇಕು. ಮತ್ತು ನಾನು ಹೇಳುವುದೇನೆಂದರೆ ಈ ಸದ್ಯ ಯಾವ ಕಾರ್ಮಿಕ ಕಾಯಿದೆ ಇರುತ್ತದೆ ಆದನ್ನು ಬಿಗಿಯಾಗಿ ಕಟ್ಟುನಿಟ್ಟಾಗಿ ಕಾರ್ಯರೂಪದಲ್ಲಿ ತರಬೇಕು ಎಂದು ಈ ಮೂಲಕ ಸರ್ಕಾರಕ್ಕೆ ವಿನಂತಿಸಿ, ನನ್ನ ಮಾತನ್ನು ಮುಗಿಸುತ್ತೇನೆ.

# ಧರ್ಮಸಾಗರ ಗ್ರಾಮದಲ್ಲಿ ನಡೆದ ಅಹಿತಕರ ಘಟನೆ

2 ಅಕ್ಟೋಬರ್ 1952

ಧರ್ಮಸಾಗರದಲ್ಲಿ ನಡೆದಂತಹ ಕೊಲೆ ಪ್ರಕರಣದ ಬಗ್ಗೆ ವಿಧಾನ ಸಭೆಯಲ್ಲಿ ಚರ್ಚೆಗೆ ಬಂದ ಪ್ರಸ್ತಾವನೆ ಕುರಿತು. ನಾನು ಕೆಲವು ವಿಚಾರಗಳನ್ನು ತಿಳಿಸಲು ಇಚ್ಛಿಸಿದ್ದೇನೆ. ಇದಕ್ಕೆ ರಾಜಕೀಯ ಬಣ್ಣ ಕೊಟ್ಟು ಕಾಂಗ್ರೆಸ್ ಕಾರ್ಯಕರ್ತರು ಈ ಕೃತ್ಯ ಮಾಡಿದ್ದಾರೆ ಎಂದು ಹೇಳಲಾಗಿದೆ. ನಾನು ಹೇಳುವುದೇನೆಂದರೆ ಕಾಂಗ್ರೆಸ್‌ನ ದೊಡ ಸಂಘಟನೆಗೆ ಇಂತಹ ಅಪವಾದ ಬಂದಿದ್ದು ವಿಶಾದಕರ ಸಂಗತಿಯಾಗಿದೆ. ಈ ಸಂಘಟನೆ ಅಹಿಂಸಾ ತತ್ವದ ಮೇಲೆ ವಿಶ್ವಾಸವಿಟ್ಟು ಕಳೆದ 60 ವರ್ಷದ ಇತಿಹಾಸದಲ್ಲಿ ಎಂದೂ ಇಂತಹ ಅಹಿಂಸಾ ಕೃತ್ಯಗಳು ನಡೆದಿಲ್ಲಾ. ಶಸ್ತ್ರಾಸ್ತ್ರಗಳನ್ನು ಉಪಯೋಗಿಸಿಲ್ಲಾ. ಇಂದು ಕೂಡ ಅಹಿಂಸಾ ತತ್ವದ ಆಧಾರದ ಮೇಲೆ ಕಾಂಗ್ರೆಸ್ ಪಕ್ಷ ಮುಂದುವರೆಯುತ್ತದೆ.

ಗಾಂಧಿಜಯಂತಿ ದಿನ ಕಾಂಗ್ರೆಸ್ ಕಾರ್ಯಕರ್ತರು ಪ್ರಭಾತ್ ಪೇರಿ ತೆಗೆಯುತ್ತಾರೆ. ಕೆಲವು ಕಡೆ ಅವರ ಜೊತೆ ಬಹಳ ದುಷ್ಟ ವ್ಯವಹಾರ ಜನರು ಮಾಡುತ್ತಾರೆ. ಕೊಡಂಗಲ್ ಪಟ್ಟಣದಲ್ಲಿ ಕಾಂಗ್ರೆಸ್ ನಾಯಕರು ಒಂದು ಸಮಾರಂಭ ಏರ್ಪಡಿಸಿದ್ದರು. ಗಾಂಧಿ ಜಯಂತಿ ನಿಮಿತ್ಯ ಅವರು ಪಟ್ಟಣದಲ್ಲಿ ಮೆರವಣಿಗೆ ತೆಗೆದಿದ್ದರೂ, ಇದರ ಮೇಲೆ ಕೆಲವು ವಿರೋಧ ವ್ಯಕ್ತಪಡಿಸಿದರು. ಅಲ್ಲದೆ ರಸ್ತೆಗೆ ಸಂಚಾರ ಅಡ್ಡಿ ಮಾಡಿದರು

ಆದರೆ ಕಾಂಗ್ರೆಸ್ ನಾಯಕರು ಗಲಭೆ ನಡೆಸಿದ ಜನರ ಮನೆಗೆ ಹೋಗಿ ಸಮಜಾಯಿಸಿದರು. ಕಾಂಗ್ರೆಸ್ ಪಕ್ಷದ ಧುರೀಣರ ನೀತಿ ಚೆನ್ನಾಗಿರದಿದ್ದರೆ ಗಲಭೆಗೆ ಕಾರಣರಾದವರ ಮನೆಗೆ ಏಕೆ? ಹೋಗುತ್ತಿದ್ದರು. ಅವರಿಗೆ ಏಕೆ ಸಮಜಾಯಿಸಿ ಮಾತನಾಡುತ್ತಿದ್ದರು. ವಿಧಾನ ಸಭೆಯಲ್ಲಿಯೂ ಕೂಡ ಈಮಾತನ್ನು ಒಪ್ಪಿದ್ದಾರೆ. ಕಮ್ಯುನಿಷ್ಟರ ಮನೆಮನೆಗೆ ಹೋಗಿ ಸಮಜಾಯಿಸಿದ್ದು ಇದು ಕಾಂಗ್ರೆಸ್ ಧುರೀಣರ ಉತ್ತಮ ನೀತಿಯನ್ನು ತೋರಿಸಿಕೊಡುತ್ತದೆ.

ಇದೇ ತರಹ ಕರ್ನಾಟಕದ ಆಳಂದ ತಾಲ್ಲೂಕಿನ ಒಂದು ಹಳ್ಳಿಯಲ್ಲಿ ಇಂತಹದ್ದೊಂದು ಘಟನೆ ಸಂಭವಿಸಿತ್ತು. ಅದನ್ನು ಕಾಂಗ್ರೆಸ್‌ದವರು ಸಮಜಾಯಿಸಿ ಅಸಮಸ್ಯೆಯನ್ನು ಬಗೆಹರಿಸಿದರು. ಈ ತರಹ ಅನಾಶ್ಯಕವಾಗಿ ವಿನಾಕಾರಣ ಕಾಂಗ್ರೆಸ್‌ನವರ ಮೇಲೆ ಬ್ಲೇಮ್ ಮಾಡುವುದು ಸರಿಯಾದ ಕ್ರಮವಲ್ಲ.

ಇನ್ನೊಂದು ವಿಷಯವೆನೆಂದರೆ ಪುರಸಭೆಯ ಚುನಾವಣೆಗಳಲ್ಲಿ ಜನರು ನಿಮ್ಮ ಕಡೆ ಬೆಂಬಲಿಸಿಲ್ಲೆಂದು ತೋರಿಸಿಕೊಟ್ಟಿದೆ. ಈ ರೀತಿ ವ್ಯಂಗ್ಯ ಮಾಡುವುದು ತಪ್ಪೆನಿಸುತ್ತದೆ. ಇಂತಹ ವಿಷಯದಲ್ಲಿ ತಾವು ವಿಚಾರ ಮಾಡಬೇಕು. ನೀವು ದಾರಿ ತಪ್ಪುತ್ತಿದ್ದೀರಿ. ನಿಮ್ಮ ಕಾರ್ಯಕರ್ತಗಲ್ಲಿ

ಶಸ್ತ್ರಾಸ್ತ್ರಗಳು ಇವೆ. ನೀವುಗಳು ಸರಕಾರಕ್ಕೆ ನಿಮ್ಮ ಶಶ್ತ್ರಾಸ್ತ್ರಗಳು ಪೂರ್ತಿಯಾಗಿ ಸರ್ಕಾರಕ್ಕೆ ಒಪ್ಪಿಸಲಿಲ್ಲ. ಇದರಲ್ಲಿ ನೀವೇ ಅಪಾಯಕರಾಗಿದ್ದೀರಿ. ಏಕೆಂದರೆ ಅವರು ನಿಮ್ಮ ಶಸ್ತ್ರಾಸ್ತ್ರಗಳನ್ನು ಒಪ್ಪಿಸಲು ನಿರಾಕರಿಸುತ್ತಾರೆ. ಇದರಿಂದ ಸಾರ್ವಜನಿಕರಿಗೆ ನಿರಾಸಕ್ತಿವುಂಟಾಗಿ ನಿಮ್ಮ ಜನರಿಗೆ ಹೊಡೆಯುತ್ತಾರೆ. ಅದಕ್ಕೆ ನೀವು ಈ ಘಟನೆ ಕಾಂಗ್ರೆಸ್‌ನವರ ಮೇಲೆ ಹಾಕುತ್ತಿದ್ದೀರಿ. ಇದು ಕಾಂಗ್ರೆಸ್‌ನವರು ಮಾಡುವುದಿಲ್ಲ. ಇದು ಸಾರ್ವಜನಿಕರ ಪ್ರತಿಕ್ರಿಯೆಯಾಗಿರುತ್ತದೆ.

ಕಾರಣ ನೀವು ನಿಮ್ಮ ತಪ್ಪುಗಳನ್ನು ತಿದ್ದಿಕೊಳ್ಳಬೇಕು. ಆಗ ಸಾರ್ವಜನಿಕರ ಒಲವು ನಿಮ್ಮ ಕಡೆ ಆಗುತ್ತದೆ. ಆಗ ನೀವೇ ಸರ್ಕಾರ ನಡೆಸಿರೆಂದು ಹೇಳುತ್ತಾರೆ. ವಿನಾಕಾರಣ ಕಾಂಗ್ರೆಸ್ ಪಕ್ಷದ ಮೇಲೆ ಅಪವಾದ ಮಾಡಬೇಡಿರಿ. ಯಾರು ಒಬ್ಬರು ಕಾಂಗ್ರೆಸ್ ಕಾರ್ಯಕರ್ತರು ಪಕ್ಷಪಾತ ಮಾಡುವುದಿಲ್ಲ. ಹಾಗೇನಾದರೂ ಕಂಡು ಬಂದರೆ ಅಂತವರನ್ನು ಕಾಂಗ್ರೆಸ್ ಪಕ್ಷದಿಂದ ಹೊರಗೆ ಹಾಕಲು ಹಿಂದೆ ಮುಂದೆ ನೋಡುವುದಿಲ್ಲ. ಆದರೆ ನೀವು ನಿಮ್ಮ ಕಾರ್ಯಕರ್ತರು ಹೀಗೆನಾದರೂ ಮಾಡಿದರೂ ಅವರನ್ನು ಹೊರಗೆ ಹಾಕದೆ ಬೆಂಬಲ ನೀಡುತ್ತೀರಿ.

ಇಂತಹದ್ದೇ ಪ್ರಕರಣದಲ್ಲಿ ಆಳಂದ ತಾಲ್ಲೂಕದಲ್ಲಿ ನಿಮ್ಮ ಕಾರ್ಯಕರ್ತರು ಭಾಗವಹಿಸಿದ್ದು ಖಚಿತವಾಗಿದೆ. ನೀವು ಯಾವ ಆಧಾರದ ಮೇಲೆ ನಾವು ನಿರ್ದೋಶಿ ಇದ್ದೇವೆ ಎಂದು ಹೇಳುತ್ತೀರಿ ಎಂದು ಹೇಳುತ್ತಾ ನನ್ನ ಮಾತುಗಳನ್ನು ಮುಗಿಸುತ್ತೇನೆ.

# ಪೋಲಿಸ್ ಆ್ಯಕ್ಷನ್ ಕುರಿತು

21 ಅಕ್ಟೋಬರ್ 1953

ಇವತ್ತಿನ ದಿನ ಏನು ರೆಜುಲೇಷನ್ ಮಾಡಿದ್ದೀರಿ. ಅದಕ್ಕೆ ನನ್ನ ಅಭಿನಂದನೆಗಳು. ಆದರೆ ಈ ವಿಷಯ ಕುರಿತು ಚರ್ಚಿಸುವಾಗ ಪೋಲಿಸ್ ಆ್ಯಕ್ಷನ್ ಹಿಂದು ಮತ್ತು ಮುಸ್ಲಿಂ ಬಾಂದವರಲ್ಲಿ ಏನೂ ಭಿನ್ನಾಭಿಪ್ರಾಯಗಳು ಅಥವಾ ವೈಮನಸ್ಸು ಬಂದಿದೆಯೇ ಅದನ್ನು ಹೇಗೆ ನಿವಾರಿಸಬೇಕು ಎಂಬುದೇ ನಮ್ಮ ಮುಂದಿರುವ ಪ್ರಮುಖ ಪ್ರಶ್ನೆಯಾಗಿದೆ.

ನನ್ನ ವಿಚಾರದಲ್ಲಿ ಈ ವಿಷಯ ಕುರಿತು ಕೆಲವು ನಿಜಾಂಶ ಇರಬಹುದು. ಆದರೆ ಒಂದು ಪಕ್ಷದ ವತಿಯಿಂದ ಈ ರೆಜುಲೇಷನ್ ಮಾಡಿದ್ದೀರಿ. ಎಂದು ನಾನು ಹೇಳಲು ಇಚ್ಛಿಸುವುದಿಲ್ಲ. ವಿರೋಧ ಪಕ್ಷದವರ ಅಭಿಪ್ರಾಯದಲ್ಲಿ ಎರಡು ರೀತಿ ಕಂಡು ಬರುತ್ತದೆ. ಈ ಘಟನೆಯಲ್ಲಿ ಯಾರ ಮೇಲೆ ಅತ್ಯಾಚಾರ ಆಗಿದೆಯೋ ಅವರನ್ನು ರಕ್ಷಿಸುವ ಮತ್ತು ಸಹಾಯ ನೀಡಬೇಕು. ಆದರೆ ಪೋಲಿಸ್ ಆ್ಯಕ್ಷನ್ ಹಿನ್ನೆಲೆಯಲ್ಲಿ ಅದರ ಹಿಂದಿನ ಏನು ಘಟನೆ ನಡೆದಿದೆಯೊ ಅದನ್ನು ಇದಕ್ಕೆ ಜೋಡಿಸಬಾರದು. ಏಕೆಂದರೆ ತಪ್ಪು ಮಾಡಿದವರೇ ಬೇರೆ ಶಿಕ್ಷೆ ಪಡೆಯುವವರೇ ಬೇರೆ.

ಮಾನವೀಯತೆಯ ಆಧಾರದ ಮೇಲೆ ಏನು ಅಫೀಲ್ ಮಾಡಲಾಗಿದೆಯೇ ಹೈದ್ರಾಬಾದಿನ ಒಂದು ಕೋಟಿ ಎಂಭತ್ತು ಲಕ್ಷ ಜನರ ಮೇಲೆ ಏನು ಅತ್ಯಾಚಾರ ಆಗಿ ಹೋಗಿದೆಯೋ ಅವರು ಹಿಂದು ಇರಬಹುದು ಅಥವಾ ಮುಸ್ಲಿಂ ಇರಬಹುದು. ನನ್ನ ತಿಳಿದ ಮಟ್ಟಿಗೆ ಇದರ ಹಿನ್ನೆಲೆ ಬೇರೆ ಏನೋ ಇರುತ್ತದೆ. ಅವರ ಮೇಲೆ ಏನೂ ಅತ್ಯಾಚಾರ ನಡೆದು ಹೋಗಿದೆಯೋ ಈ ಸಂಬಂಧ ನಾವು ವಿಚಾರ ಮಾಡಬೇಕಾದ ಅವಶ್ಯಕತೆ ಇದೆ.

ಈ ರೆಜ್ಯುಲೇಷನ್‌ದಲ್ಲಿ ಅತ್ಯಾಚಾರಕ್ಕೆ ಒಳಗಾದ ಬಹಳಷ್ಟು ಜನರಿಗೆ ಈ ರೆಜ್ಯುಲೇಷನ್‌ನಲ್ಲಿ ನಮೂದಿಸಲಿಲ್ಲ. ಇದೇ ತರಹ ಆಂಧ್ರದಲ್ಲಿಯೂ ಈ ಹೆಸರಿನ ಮೇಲೆ ಸಾವಿರಾರು ಜನರನ್ನು ಕೊಲೆ ಮಾಡಲಾಗಿದೆ. ಮನೆಗಳನ್ನು ಕೆಡವಲಾಗಿದೆ. ಆಸ್ತಿ ಪಾಸ್ತಿಯನ್ನು ಲೂಟಿ ಮಾಡಲಾಗಿದೆ. ಆದರೆ ಈ ರೆಜ್ಯುಲೇಷನ್‌ದಲ್ಲಿ ಈ ವಿಷಯದ ಬಗ್ಗೆ ಏನು ತೋರಿಸಿರುವುದಿಲ್ಲ. ಅವರ ಭಾವನೆ ಏನೋ ಇದೆಯೋ ನನಗೆ ಗೊತ್ತಿಲ್ಲ. ಆದರೆ ಮಾನವೀಯತೆಯ ಹೆಸರಿನ ಮೇಲೆ ನಮಗೆ ಏನೂ ಮಾಡಬೇಕಾದರೆ ಇದರಲ್ಲಿ ನಾವು ಎಲ್ಲರ ವಿಷಯ ಕುರಿತು ವಿಚಾರ ಮಾಡತಕ್ಕದ್ದು. ಆದರೆ ಈ ರೆಜ್ಯುಲೇಷನ್‌ದಲ್ಲಿ ಅಂತಹದ್ದೇನೂ ಇಲ್ಲ.

ಹಿಂದೆ ಏನೂ ಘಟನೆ ನಡೆದಿದೆಯೋ ಅದನ್ನು ನಾವು ತಿರಸ್ಕರಿಸುವುದಿಲ್ಲ. ಆದರೆ ಇದಕ್ಕೆ ಏನು ಪರಿಹಾರ ಮಾಡಬೇಕೋ ಈ ಬಗ್ಗೆ ನಮಗೆ ಮಹತ್ವದ ಪ್ರಶ್ನೆಯಾಗಿದೆ. ನಾನು ಕೂಡ

ಇಚ್ಛಿಸುವುದೇನೆಂದರೆ ಪೋಲಿಸ್ ಆ್ಯಕ್ಷನ್ ನಮ್ಮ ಜಿಲ್ಲೆಯಲ್ಲಿ ಏನೂ ಘಟನೆಗಳು ಆಗಿದೆಯೋ, ಸರ್ಕಾರದವರು ಆದಷ್ಟು ಮಟ್ಟಿಗೆ ಬಹಳ ಒಳ್ಳೆಯ ಪ್ರಯತ್ನ ಮಾಡಿದ್ದಾರೆ. ಈ ವಿಷಯಕ್ಕೆ ನಮಗೆ ಯಾವ ಸಂಶಯವಿಲ್ಲಾ.

ಈ ಪೋಲಿಸ್ ಆ್ಯಕ್ಷನ್ ಗಲಭೆಗಳಲ್ಲಿ ಕನಿಷ್ಟ ಅಂದಾಜು 600 ಜನ ಮಹಿಳೆಯರು ವಿಧವೆಯಾಗಿದ್ದಾರೆ. ಅವರಿಗೆ ಬೇರೆ ಮದುವೆ ಆಗಲು ಅಥವಾ ಅವರನ್ನು ಬೇರೆಯವರು ಮದುವೆ ಆಗಲು ಸಿದ್ಧರಿಲ್ಲ ಏಕೆಂದರೆ ಅವರ ಆಸ್ತಿ ಪಾಸ್ತಿ ನಾಶದೊಂದಿಗೆ ಅವರು ಅನಾಥರಾಗಿದ್ದಾರೆ.

ನಾನು ಛಾಲೆಂಜ್ ಮಾಡಿ ಹೇಳಬಹುದು. ಈ ಸಮಸ್ಯೆಯನ್ನು ಜಮಿಯಲ್‌ವುಲ್ ಉಲ್ಮಾ ಆಗಲೀ ಅಥವಾ ಬೇರೆ ಯಾವುದೇ ರಾಜಕೀಯ ಅಥವಾ ಸಾಮಾಜಿಕ ಸಂಘಟನೆಯಾಗಲೀ ಈ ಸಮಸ್ಯೆಯನ್ನು ಪರಿಹಾರ ಮಾಡಲಿಲ್ಲ. ಆದರೆ ನಮ್ಮಂತಹ ಕೆಲವು ಖಾದಿಧಾರಿಗಳು ಈ ವಿಷಯಗಳನ್ನು ಮಾಧ್ಯಮಗಳಲ್ಲಿ ಪ್ರಚಾರಕ್ಕೆ ತಂದು ಸಮಸ್ಯೆಯನ್ನು ಉಲ್ಬಣ ಗೊಳಿಸಿದ್ದಾರೆ. ಆದರೆ ಯಾರು ಪರಹಾರ ಧನ ಕೊಟ್ಟಿಲ್ಲ. ಅಥವಾ ಅವರ ಸಮಸ್ಯೆಯನ್ನು ಬಗೆಹರಿಸಲು ಮುಂದಾಗಲಿಲ್ಲ. ಈ ವಿಷಯದಲ್ಲಿ ಕಮಿಷನ್ ಆಫ್ ಎನ್‌ಕ್ವಾಯರಿ Consititute ಮಾಡಿದರೆ ಮೂರು ವರ್ಷಗಳವರೆಗೆ ಅವರು ಏನೂಮಾಡಲು ಸಾಧ್ಯವಿಲ್ಲ.

ನಮ್ಮಂತವರು, ಸ್ಥಳೀಯ ಜನರು ನಮಗೆ ಪೋಲಿಸ್ ಆ್ಯಕ್ಷನ್‌ಕ್ಕಿಂತ ಮೊದಲು ಅಲ್ಲಿ ಏನು ಪರಿಸ್ಥಿತಿ ಇತ್ತು ನಮಗೆ ಗೊತ್ತಿದೆ. ಮತ್ತು ಈ ಪೋಲಿಸ್ ಆ್ಯಕ್ಷನ್ ನಂತರ ಏನೂಸ್ಥಿತಿ ಆಯಿತು ಅದೂಗೊತ್ತಿದೆ. ಕಾಂಗ್ರಸ್ ಪಕ್ಷವಾಗಲೀ ಸೋಷಿಯಲಿಸ್ಟ ಪಕ್ಷವಾಗಲೀ ಈ ಜವಬ್ದಾರಿಯನ್ನು ತೆಗೆದುಕೊಂಡು ತಮ್ಮ ತಮ್ಮ ಸ್ಥಳದಲ್ಲಿ ಈ ಸಮಸ್ಯೆಗಳ ಪರಿಹಾರಕ್ಕೆ ಮುಂದಾಗಬಹುದು. ಈ ವಿಷಯದಲ್ಲಿ ನ್ಯಾಯಾಲಯಗಳಲ್ಲಿ ಕೇಸ್ ನಡೆದಿವೆ. ಆದರೆ ನ್ಯಾಯಾಲಗಳಿಂದ ಅಥವಾ ಕಮಿಷನ್ ಆಫ್ ಎನ್‌ಕ್ವೆರಿಯಿಂದ ಈ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯವಿಲ್ಲ.

ಆದರೆ ಈ ಸಂಬಂಧವಾಗಿ ಏನೂ ಕೆಲಸ ಮಾಡಬೇಕಾದರೆ ಅದು ಕೇವಲ ಸ್ಥಾನೀಯ ಜನರ ಕಡೆಯಿಂದ ಸಹಾಯ ಆಗಬಹುದು. ಸ್ಥಳೀಯ ಸಂಘಟನೆಗಳು ಅಥವಾ ಸಮಾಜದ ಜವಾಬ್ದಾರಿಯುತ ವ್ಯಕ್ತಿಗಳು ಈ ಬಗ್ಗೆ ಏನಾದರೂ ಮಾಡಬಹುದು, ಮತ್ತುಸರಳವಾಗಿ ಈ ಸಮಸ್ಯೆಯನ್ನು ಇತ್ಯರ್ಥಗೊಳಿಸಬಹುದು.

ಈ ಸಂಬಂಧವಾಗಿ ಸರ್ಕಾರ ಯಾವುದೇ ಖರ್ಚುಮಾಡುವ ಅವಶ್ಯಕತೆ ಬರುವುದಿಲ್ಲ ಮತ್ತು ಪರಸ್ಪರರಲ್ಲಿ ಸೌಹಾರ್ದತೆ ಉಂಟಾಗುತ್ತದೆ. ಈ ಸಂಬಂಧ ನಾನು ಯಾದಗಿರಿ ಪಟ್ಟಣದ ಉದಾಹರಣೆ ಹೇಳುತ್ತೇನೆ. ಅಲ್ಲಿ ದೊಡ್ಡ ದಂಗೆಯಾಯಿತು. ಆದರೆ ಕಾಂಗ್ರೇಸ್‌ನವರು ಮತ್ತು ನಾವು ಲೂಟಿಮಾಡಿದ ಸಾಮಾನುಗಳನ್ನು ಸಂಬಂಧಪಟ್ಟವರಿಗೆ ಕೊಡಿಸಿದ್ದೇವೆ. ನಾವೆಲ್ಲರೂ ಜಂಟಿಯಾಗಿ ಪ್ರಯತ್ನ ಮಾಡಬಹುದು.

ಹಿಂದು, ಮುಸಲ್ಮಾನ, ಕಾಂಗ್ರೇಸ್, ಸೋಷಿಯಲಿಸ್ಟ್ ಹಾಗೂ ಹಿಂದೂ ಮಹಾಸಭಾ ಎಲ್ಲರೂ ಕೂಡಿ ಕುಳಿತುಕೊಂಡು ಈ ವಿಷಯದಲ್ಲಿ ವಿಚಾರಿಸಬಹುದು. ಯಾರಾದರೂ ಒಬ್ಬರು ಅರ್ಜಿಯನ್ನು ಮಂತ್ರಿಗಳ ಹತ್ತಿರ ಸಲ್ಲಿಸದರೆ, ಆ ಅರ್ಜಿಯನ್ನು ಕಲೆಕ್ಟರ್ ಬಳಿಗೆ ಕಳಿಸುತ್ತಾರೆ. ಕಲೆಕ್ಟರ್ ತಹಶೀಲ್ದಾರರ ಬಳಿಗೆ ಕಳಿಸುತ್ತಾರೆ. ಆದರೆ ವಿಷಯ ಇತ್ಯರ್ಥಗೊಳ್ಳದೇ ಹಾಗೆಯೇ ಸಮಸ್ಯೆಯಾಗಿಯೇ ಉಳಿಯುತ್ತದೆ.

ನಾವು ಏನು ಮಾಡಬೇಕಾದರೆ ನಮ್ಮಂತಹ ಜವಬ್ದಾರಿ ವ್ಯಕ್ತಿಗಳು ತಮ್ಮ ತಮ್ಮ ಕ್ಷೇತ್ರದಲ್ಲಿ ಇಂತಹ ಅಹಿತಕರ ಘಟನೆಗಳ ಪಟ್ಟಿಮಾಡಬೇಕು. ಪೋಲಿಸ್ ಆ್ಯಕ್ಷನ್ ಮುಂಚಿತ ಮತ್ತು ಪೋಲಿಸ್ ಆ್ಯಕ್ಷನ್ ನಂತರ ಆಗಿರುವ ಕಾನೂನುಬಾಹಿರವಾಗಿ ಆಸ್ತಿಗಳ ಮೇಲೆ ಕಬ್ಜೆ ಮಾಡಲಾಗಿದೆ. ರಜಾಕಾರರ ಹಾವಳಿಯಲ್ಲಿ ಹಿಂದುಗಳ ಮೇಲೆ, ಹಿಂದುಗಳು ಮುಸ್ಲಿಂರ ಮೇಲೆ ಅತೀ ಕ್ರಮಣ ಮಾಡಿದ ಉದಹಾರಣೆಗಳು ಸಾಕಷ್ಟಿವೆ. ಈ ಘಟನೆಯ ಬಗ್ಗೆ ಪರಿಶೀಲನೆ ಮಾಡಬೇಕು. ನಾವೇ ಅಧಿಕಾರಿಗಳಾಗಿ ಒಂದು ಪ್ರೊಗ್ರಾಮ ಹಾಕಿ ಸಂಬಂಧಿಸಿದ ವಿಷಯಗಳ ಬಗ್ಗೆ ವಿಚಾರಮಾಡಿ ಆ್ಯಕ್ಷನ್ ತೆಗೆದುಕೊಂಡರೆ ನಾಲ್ಕಾರು ತಿಂಗಳ ಒಳಗಾಗಿ ಬಹಳವಾದರೆ ಒಂದು ವರ್ಷಗೊಳಗೆ ಈ ಸಮಸ್ಯೆಯನ್ನು ಇತ್ಯರ್ಥಗೊಳಿಸಬಹುದು.

ನಾವು ಕಮಿಷನ್ ಆಫ್ ಎನ್‌ಕ್ವೆಯರಿಗೆ ಕೊಡಿಸಿದರೆ ಇಂತಹ ವಿಷಯಗಳು ಐದು ವರ್ಷ ಮೀರಿದರೂ ಇತ್ಯರ್ಥಗೊಳಿಸುವುದಿಲ್ಲ. ಕಾರಣ ಮಾನವೀಯತೆಯ ಆಧಾರದ ಮೇಲೆ ಮನವಿಮಾಡಿಕೊಳ್ಳುತ್ತಿದ್ದೀರಿ. ಈ ವಿಷಯಕ್ಕೆ ನಾನು ಹೇಳುವುದೇನೆಂದರೆ ಇದರ ಬದಲು ವ್ಯಕ್ತಿಗತವಾಗಿ ಎಲ್ಲರೂ ಪ್ರಯತ್ನಿಸಬೇಕಾಗಿದೆ ಎಂದು ಹೇಳುತ್ತಾ ನನ್ನ ಮಾತನ್ನು ಮುಗಿಸಿತ್ತೇನೆ.

# ಮೈಸೂರು ಅಪ್ರೋಪ್ರಿಯೇಶನ್ ಮಸೂದೆ

**30 ಜುಲೈ 1957**

ಈಗ ಸಭೆಯ ಮುಂದೆ ಇರತಕ್ಕ ಅಪ್ರೋಪ್ರಿಯೇಶನ್ ಬಿಲ್ಲಗೆ ನಾನು ಬೆಂಬಲ ಕೊಡುತ್ತೇನೆ ಮತ್ತು ಕೆಲವು ವಿಷಯಗಳನ್ನು ನಮ್ಮ ರಾಜ್ಯ ಸರ್ಕಾರಕ್ಕೆ ತಿಳಿಸಬಯಸುತ್ತೇನೆ. ನಮ್ಮ ದೇಶದಲ್ಲಿ ಎರಡನೆಯ ಪಂಚವಾರ್ಷಿಕ ಯೋಜನೆಯು ಪ್ರಾರಂಭವಾಗಿ ಈಗ ಒಂದು ವರ್ಷವಾಯಿತು. ಎರಡನೆಯ ಪಂಚವಾರ್ಷಿಕ ಯೋಜನೆಯ ಅವಧಿಯನ್ನು ನಿರುದ್ಯೋಗವನ್ನು ಹೊಗಲಾಡಿಸಲು ಮತ್ತು ಎಲ್ಲರಿಗೂ ಉದ್ಯೋಗವನ್ನು ಒದಗಿಸಿಕೊಡುವ ವಿಷಯ ಕುರಿತು ಸಾಕಷ್ಟು, ಹಣವನ್ನು ಈ ಯೋಜನೆಯಲ್ಲಿ ಒದಗಿಸಲಾಗಿದೆ. ಅದರಲ್ಲಿಯೂ ವಿಶೇಷವಾಗಿ ಕೈಗಾರಿಕೆಗಳಿಗೆ ಹೆಚ್ಚು ಪ್ರೋತ್ಸಾಹ ಕೊಡಲಾಗಿದೆ. ಕೈಗಾರಿಕೆಗಳಲ್ಲಿ ರೂರಲ್ ಇಂಡಸ್ಟ್ರೀಜ ಬಗ್ಗೆ ಕೆಲವು ಮಾತುಗಳನ್ನು ನಾನು ಹೇಳಬಯಸುತ್ತೇನೆ. 1950–51ರಲ್ಲಿ ಗ್ರಾಮೋದ್ಯೋಗ ಕೇಂದ್ರ ಬೋರ್ಡ್ ಏರ್ಪಟಾಯಿತು. ಅದೇ ರೀತಿಯಾಗಿ ರಾಜ್ಯ ಸರ್ಕಾರದಲ್ಲಿ ಸಹ ಬೋರ್ಡುಗಳನ್ನು ಮಾಡಿ ಬೋರ್ಡಗಳ ಮುಖಾಂತರ ಸಹಾಯವನ್ನು ತೆಗೆದುಕೊಳ್ಳಬೇಕು ಎಂದು ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರ ನಿರ್ಣಯ ಮಾಡಿ ರಾಜ್ಯಸರ್ಕಾರ ಸ್ಟ್ಯಾಚುಟರಿ ಬೋರ್ಡ್ ಮಾಡಬೇಕೆಂದು ಆಜ್ಞೆ ಆಯಿತು. ವೇಳೆಸ್ವಲ್ಪ ಇದೆ. ಆದಕಾರಣ ಒಂದೇ ಒಂದು ವಿಷಯವನ್ನು ಹೇಳಬಯಸುತ್ತೇನೆ. ಹಿಂದಿನ ಅಧಿವೇಶನದಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ಬೋರ್ಡ್ ರಚನೆಯ ಬಿಲ್ಲನ್ನು ನಾವು ಪಾಸು ಮಾಡಿದ್ದೇವೆ.

ಬೊಂಬಾಯಿ ಪ್ರಾಂತದಲ್ಲಿ ವಿಲೇಜ್ ಇಂಡಸ್ಟ್ರೀಸ್ ಬೋರ್ಡನಿಂದ ಸಾಕಷ್ಟು ಹಣ ಖಾದೀ ಉದ್ಯಮಕ್ಕೆ ಉಪಯೋಗವಾಗುತ್ತದೆ. ಹೈದರಬಾದ್ ಖಾದೀ ಬೋರ್ಡಿನಿಂದ 1956–57ನೇಯ ಸಾಲಿನಲ್ಲಿ ಆ ಭಾಗಕ್ಕೆ ಹಣ ಕೊಡಲಾಗಿದೆ. ಆದರೆ ಇಲ್ಲಿ ಸ್ಟಾಚುಟರಿ ಬೋರ್ಡ್ ಇಲ್ಲದಿರುವ ಕಾರಣ ಐದಾರು ಲಕ್ಷ ರೂಪಾಯಿಗಳನ್ನು ಪಡೆಯಲಿಕ್ಕಾಗಲಿಲ್ಲ. ಗ್ರಾಮೋದ್ಯೋಗಿಗಳಿಗೆ ಕೊಡುವ ನಾಲ್ಕೈದು ಲಕ್ಷ ರೂಪಾಯಿಗಳು ಹಾಳಾದವು. ಈಗ ನಮ್ಮಲ್ಲಿ ಸ್ಟಾಚುಟರಿ ಬೋರ್ಡನ್ನು ಸ್ಥಾಪಿಸಲು ಒಂದು ಮಸೂದೆಯನ್ನು ಪಾಸ್ ಮಾಡಿದ್ದಾರೆ. ಅದಕ್ಕೆ ರಾಷ್ಟ್ರಪತಿಯವರ ಹಸ್ತಾಕ್ಷರ ಮನ್ನಣೆಗೆ ಬಂದಿದೆ. ಇಲ್ಲಿಯವರೆಗೂ ಮೈಸೂರು ರಾಜ್ಯ ಸರ್ಕಾರ ಈ ಸ್ಟ್ಯಾಚುಟರಿ ಬೋರ್ಡಿನ ವಿಚಾರದಲ್ಲಿ ಏಕೆ ಕೇಂದ್ರ ಸರ್ಕಾರವನ್ನು ಕೇಳಲಿಲ್ಲವೋ ನನಗೆ ಗೊತ್ತಾಗಲಿಲ್ಲ. ಇತರ ಎಷ್ಟೋ ಹಣವನ್ನು ರಾಜ್ಯ ಸರ್ಕಾರಗಳಿಗೆ ಕೇಂದ್ರ ಸರ್ಕಾರದವರು ಹಣವನ್ನು ಒದಗಿಸಿದ್ದಾರೆ. ಆದರೆ ದುರ್ದೈವವಶಾತ್ ಹಳೆಯ ಮೈಸೂರಿನಲ್ಲಿ ಮೊದಲಿನಿಂದಲೂ ಸ್ಟಾಚುಟರಿ ಬೋರ್ಡ ಇರಲಿಲ್ಲ. ಆದ್ದರಿಂದ ಎರಡು ವರ್ಷಗಳಿಂದ ಸುಮಾರು 50–60 ಲಕ್ಷ ರೂಪಾಯಿಗಳನ್ನು ನಮ್ಮ ಸರ್ಕಾರ ಕಳೆದುಕೊಂಡಿದೆ ಹೋದ ವರ್ಷ 20–22 ಲಕ್ಷ ರೂಪಾಯಿಗಳು ನಷ್ಟವಾಗಿದೆ.

ಈಗ ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಇದನ್ನು ಸ್ಥಾಪಿಸಬೇಕೆಂದು ಯೋಚಿಸುತ್ತಿದ್ದಾರೆ. ಇಂತಹ ಎಂಟು–ಹತ್ತು ಸ್ಟ್ಯಾಟುಟರಿ ಬೋರ್ಡುಗಳು ಇರಬೇಕು. ಸ್ಟ್ಯಾಟುಟರಿ ಬೋರ್ಡುಗಳನ್ನು ಸ್ಥಾಪನೆ ಮಾಡಿದರೆ. ಆಗ ಕೇಂದ್ರ ಸರ್ಕಾರದಿಂದ ಸಾಕಷ್ಟು ಗ್ರಾಂಟು ಮತ್ತು ಸಾಲದ ರೂಪದಲ್ಲಿ ಹಣವನ್ನು ಪಡೆಯಬಹುದೆಂದು ಹೇಳುತ್ತೇನೆ. ಹಳೆಯ ಮೈಸೂರಿನಲ್ಲಿ ಮಹಾಪುರುಷ ಶ್ರೀಮಾನ್ ವಿಶ್ವೇಶ್ವರಯ್ಯನವರು ಮಾಡಿರುವ ಸ್ಕೀಮುಗಳು ಎಷ್ಟೋ ಇವೆ.

ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ 103 ಕೈಗಾರಿಕೆಗಳ ಅಭಿವೃದ್ಧಿಗಾಗಿ ಅಳವಡಿಸಲೆಂದು ಸೂಚಿಸಿದ್ದಾರೆ. ಅದರಲ್ಲಿ ಖಾದಿಯನ್ನು ಬೋರ್ಡ್ ಮತ್ತು ಹ್ಯಾಂಡಲೂಂ ಬೋರ್ಡ್ ಬರುತ್ತದೆ. ಈ ವರ್ಷವೂ ಸಹ ಬಜೆಟ್ಟಿನಲ್ಲಿ ಸಾಕಷ್ಟು ಹಣವನ್ನು ಒದಗಿಸಿದ್ದಾರೆ. ಆದರೆ ನಮ್ಮ ರೆವಿನ್ಯೂಗಾಗಿ ಈ ಬಾಬಿಗೆ ಹಣವನ್ನು ಉಪಯೋಗಮಾಡಬಾರದೆಂದು ನನಗೆ ತೋರುತ್ತಿದೆ. ಕೇಂದ್ರದಿಂದ ನಮಗೆ ಹಣಸಿಕ್ಕುವ ಕಾಲಕ್ಕೆ ಈ ದುಡ್ಡನ್ನು ಬಳಸುವುದು ಅನಾವಶ್ಯಕ. ನಾವು ಬಜೆಟ್ಟಿನಲ್ಲಿ ಈ ಬಾಬಿಗೆ ಒದಗಿಸಿರುವ ಹಣಕ್ಕಿಂತಲು ಹೆಚ್ಚಿಗೆ ಕೊಡುವ ರೂಪಾಯಿಗಳನ್ನು ಗ್ರಾಂಟು ಸಾಲದ ರೂಪವಾಗಿ ಕೇಂದ್ರ ಸರ್ಕಾರದವರು ಕೊಡುವವರಾಗಿದ್ದಾರೆ. ಆದ್ದರಿಂದ ನಾವಿನ್ನಾದರೂ ಈ ಬಾಬಿಗೆ ಒದಗಿಸಿರುವ ಹಣವನ್ನು ಉಳಿಸಿಕೊಂಡು ಅದನ್ನು ಬೇರೆ ಇತರ ಯೋಜನೆಗಳಿಗೆ ವಿನಿಯೋಗಿಸುವುದು ಉತ್ತಮವೆಂದು ನಮ್ಮ ಹಣಕಾಸಿನ ಮಂತ್ರಿಗಳನ್ನು ಪ್ರಾರ್ಥನೆ ಮಾಡುತ್ತೇನೆ.

ಸೆಂಟ್ರಲ್ ಖಾದೀ ಬೋರ್ಡನ್ನು ಮತ್ತು ಗ್ರಾಮೋದ್ಯೋಗ ಬೋರ್ಡನ್ನು ಸ್ಥಾಪಿಸುವುದರಿಂದ ನಿರುದ್ಯೋಗ ಸಮಸ್ಯೆಯನ್ನು ನಿವಾರಿಸಲು ಸಾಕಷ್ಟು ಹಣ ದೊರಕುತ್ತದೆ. ಇಡೀ ದೇಶದಲ್ಲಿ ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಬೇಕಾದಷ್ಟು ಜನರಿಗೆ ಉದ್ಯೋಗಗಳನ್ನು ಕಲ್ಪಿಸಬೇಕೆಂದಿದ್ದಾರೆ ಆದರೆ ಮೈಸೂರು ರಾಜ್ಯದಲ್ಲಿ ಉದ್ಯೋಗಗಳನ್ನು ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಒದಗಿಸಲು ಏರ್ಪಾಡು ಮಾಡಿದ್ದಾರೆಂದು ಹೇಳುವುದಕ್ಕಾಗುವುದಿಲ್ಲ. ಈ ಅಂಶಗಳಿಗೆಲ್ಲಾ ನಮ್ಮ ಸರ್ಕಾರದವರು ಜಾಗ್ರತೆಯಾಗಿ ಲಕ್ಷ್ಯ ಕೊಡಬೇಕೆಂದು ಹೇಳಿ ಮಾನ್ಯ ಅಧ್ಯಕ್ಷರು ನನಗ ಮಾತನಾಡಲು ಇಷ್ಟು ಹೊತ್ತು ಅವಕಾಶವನ್ನು ಕಲ್ಪಿಸಿಕೊಟ್ಟಿದ್ದಕ್ಕಾಗಿ ಅವರನ್ನು ವಂದಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

# ಮೈಸೂರು ಟೆನೆನ್ಸಿ ಅಗ್ರಿಕಲ್ಚರ್ ಲ್ಯಾಂಡ್ ಲಾ ಕಮಿಟಿ

**18 ಅಕ್ಟೋಬರ್ 1957**

ಮಾನ್ಯ ಅಧ್ಯಕ್ಷರೇ, ಇವೊತ್ತು ಸರಕಾರದ ಕಡೆಯಿಂದ ಲ್ಯಾಂಡ್ ರಿಫಾರಂಸ್ ವಿಷಯದಲ್ಲಿ ಬಂದಿರುವ ಈ ಜಸ್ತಿ ಸಮಿತಿಯ ವರದಿಯನ್ನು ನೋಡುವಾಗ, ಮೈಸೂರು ಸ್ಟೇಟಿನ ನಾನಾ ಭಾಗದಲ್ಲಿ ಈ ಸಮಿತಿಯವರು ಸಂಚಾರಮಾಡಿ ತಮಗೆ ಸಾಧ್ಯವಾದಷ್ಟು ಅನುಕೂಲವಾಗುವ ಹಾಗೆ ಈ ಭೂ–ಸುಧಾರಣೆ ವಿಷಯದಲ್ಲಿ ಅವರು ಒಂದು ರೀತಿಯಲ್ಲಿ ಒಂದು ವರದಿಯನ್ನು ತಯಾರಿಸಿ ಈ ಸಭೆಯ ಮುಂದೆ ತಂದು ಇಟ್ಟಿದ್ದಾರೆ. ಈ ರಿಪೋರ್ಟನ್ನು ನಾವು ಕಾಲಿಕ್ಕೆ ಕೆಲವು ವಿಷಯಗಳ ಬಗ್ಗೆ ಅವರು ಯಾವ ವಿಷಯವನ್ನು ಸರಿಯಾದ ರೀತಿಯಲ್ಲಿ ನೋಡಿಲ್ಲವೆಂದು ನನಗನಿಸುತ್ತದೆ. ಈ ಮೈಸೂರು ಸ್ಟೇಟಿನಲ್ಲಿ ಎಷ್ಟು ಎಕರೆ ಭೂಮಿಯನ್ನು ಹಂಚುವುದಕ್ಕೆ ಸಾಧ್ಯವಿದೆ, ಎಷ್ಟುಭೂಮಿ ಸರ್‌ಪ್ಲಸ್ ಆಗಿದೆ ಮತ್ತು ಇವನ್ನು ಲ್ಯಾಂಡ್ ಲೆಸ್ ಆಗಿರುವ ಜನಗಳಿಗೆ ಈಗ ಜಮೀನನ್ನು ಕೊಡುವುದಕ್ಕನುಗುಣವಾಗಿ ಒಂದು ಶಾಸನವನ್ನು ಮಾಡತಕ್ಕದ್ದಿದೆ. ಆ ಕಾರಣದಿಂದ ಈಗ ಮೈಸೂರು ಸ್ಟೇಟಿನಲ್ಲಿ ಎಷ್ಟು ಜಮೀನು ಹಂಚಲಿಕ್ಕೆ ಬರುತ್ತದೆ. ಎನ್ನುವುದನ್ನು ನೋಡಿ ಅವರು ಸರಿಯಾದ ಕಾರಣಗಳನ್ನು ಕೊಡುವುದಕ್ಕೆ ಸಾಧ್ಯವಾಗಿಲ್ಲ. ಆದರಿಂದಾಗಿ ಈಗ ಎಷ್ಟು ಎಕರೆ ಭೂಮಿಯಿದೆ, ಎಷ್ಟು ಎಕರೆಗಳಲ್ಲಿ ಲ್ಯಾಂಡ್ ಲೆಸ್ ಇದೆ ಎನ್ನುವುದನ್ನು ನಾವು ತೆಗೆದುಕೊಂಡು ಈ ಭೂಮಿಯನ್ನು ಹಂಚಲಿಕ್ಕೆ ಬರುತ್ತದೆ. ಇದು ಅಷ್ಟು ಹಸನಾದ ಕೆಲಸವಲ್ಲ.

1955–1956 ಮತ್ತು 1957ನೆಯ ಇಸ್ವಿಗಳಲ್ಲಿ ಎಷ್ಟು ಭೂಮಿಯನ್ನು ಇದುವರೆಗೆ ಲ್ಯಾಂಡ್ ಲಾರ್ಡ್ಸ್ ತಮ್ಮ ಹೆಸರಿನಿಂದ ತಮ್ಮ ಅಣ್ಣ ತಮ್ಮಂದಿರ ಹೆಸರಿಗೆ ಹಂಚಿಬಿಟ್ಟಿದ್ದಾರೋ ಎನ್ನುವುದು ಸಹ ಸರ್ಕಾರಕ್ಕೆ ಹೇಳುವುದಕ್ಕೆ ಸಾಧ್ಯವಿಲ್ಲದ ಪರಿಸ್ಥಿತಿ ಇದೆ. ಅಂದ ಮೇಲೆ ಎಷ್ಟೊ ಭೂಮಿ ಹಂಚುವೆವು ಎನ್ನುವುದನ್ನು ಹೇಳುವುದಕ್ಕೆ ಸಾಧ್ಯವಿಲ್ಲ.

ಎರಡನೆಯದು ಟೆನೆಂಟ್ ವಿಷಯ. ಟೆನೆಂಟ್ ವಿಷಯದಲ್ಲಿ ಸಹ ಎಷ್ಟು ಸಾವಿರ ಜನ ಟೆನೆಂಟ್ಸ್‌ಗಳು ಇದ್ದಾರೆ 'Ownership right' ಅವರಿಗೆ ಸಿಕ್ಕುತ್ತದೆಯೇ ಎಂದು ಹೇಳಲು ಅವರಿಗೆ ಸಾಧ್ಯವಾಗಿಲ್ಲ. ಸೀಲಿಂಗ್ ಮತ್ತು ಖಾತೆ ಹೇಗೆ ಮಾಡಬೇಕು ಎಂದು ಕೆಲವು ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ. ಸೀಲಿಂಗ್ ವಿಷಯದಲ್ಲಿ ಕಮಿಟಿಯವರು ಬಹಳ ಉಪಕಾರ ಮಾಡಿದ್ದಾರೆ. ಇದೇ ಮೈಸೂರು ಸ್ಟೇಟಿನ ಭಾಗದಲ್ಲಿ ಒಂದು ಸೀಲಿಂಗ್ ಇತ್ತು. ಲ್ಯಾಂಡ್ ರಿಫಾರ್ಮ್ಸ್ ಆದ ನಂತರ ಏನು ಕುಂದು ಕೊರತೆಗಳು ಬಂದಿವೆಯೋ ಅದನ್ನು ರೆಕ್ಟಿ ಫೈ ಮಾಡುವುದಕ್ಕೆ ಅವಶ್ಯಕತೆ ಇದೆ.

ಇವತ್ತು ಅಲ್ಲಿ ಸೀಲಿಂಗ್ ಇದೆ. ಯಾವ ದೃಷ್ಟಿಯಿಂದ ಸರ್ಕಾರದವರು ಹಾಕಬೇಕಾಗಿತ್ತೋ, ಆ ದೃಷ್ಟಿಯಿಂದ ಹಾಕಿಲ್ಲ. ಕಮಿಟಿಯವರು ಸ್ವಲ್ಪ ಆ ಭಾಗಕ್ಕೆ ಹೋಗಿದ್ದಾರೆ ಬೆಳಕು ಸಿಕ್ಕುತ್ತಿತ್ತು ಇವತ್ತು ಅಲ್ಲಿ ಸೀಲಿಂಗ್ ಇದೆ. ಡಿಕ್ಲರೇಷನ್ ಆಗಿದೆ. ಟೆನೆಂಟ್ಸ್ ಓನರ್‌ಷಿಪ್ ರೈಟ್ ಡಿಕ್ಲೇರ್ ಮಾಡಿದ್ದಾರೆ. ಆ ಭಾಗಕ್ಕೆ ಹೋಗಿದ್ದರೆ ಈ ಕಮಿಟಿಯವರಿಗೆ ಬೆಳಕು ಸಿಕ್ಕುತ್ತಿತ್ತು. ದುರ್ದೈವಶಾತ್ ಆ ಬೆಳಕು ಅವರಿಗೆ ಸಿಕ್ಕಿಲ್ಲ. ಗುಲ್ಬರ್ಗ ಡಿಸ್ಟ್ರಿಕ್ಟಿಗೆ ಹೋಗಿದ್ದಾರೆ ಅಲ್ಲಿ ಹೇಗೆ ರೆಕಾರ್ಡ್ ತಯಾರು ಮಾಡಿ ಸರ್ಟಿಫಿಕೇಟ್ ತಯಾರು ಮಾಡಿ ಆಫೀಸಿನಲ್ಲಿ ಇಟ್ಟಿದ್ದಾರೆ. ಎಷ್ಟು ಟೆನೆಂಟ್ಸ್‌ಗಳು ಅಪ್ಲಿಕೇಷನ್ಸ್ ಇವೆ. ಎಷ್ಟು ಜನರಿಗೆ ಈ ಟೆನೆನ್ಸಿ ಬಿಡಿಸಿದ್ದಾರೆ ಎನ್ನುವ ಪ್ರತಿಯೊಂದು ವಿಷಯವನ್ನೂ ತಿಳಿಯುವುದಕ್ಕೆ ಸಾಧ್ಯವಾಗುತ್ತಿತ್ತು.

ಹಿಂದೆ ಹೈದರಾಬಾದ್ ಸರ್ಕಾರದ ಭಾಗವಾಗಿದ್ದು. ಯಾದಗಿರಿ ಡಿವಿಜನ್‌ನಲ್ಲಿ ಟೆನೆನ್ಸಿ ಆಕ್ಟ್ ಪ್ರಕಾರ ಡಿಕ್ಲೇರೇಷನ್ ಆದೆ. ಸಮಿತಿಯವರು ಅಲ್ಲಿಗೆ ಹೋಗುವುದಕ್ಕೆ ಸಾಧ್ಯವಾಗಿಲ್ಲ. ಆ ಭಾಗದಲ್ಲಿ ಹಿಂದೆ ಇದ್ದ ಹೈದರಾಬಾದ ಗೌರ್ನಮೆಂಟ್ ಆ ಕಾಲಕ್ಕೆ ಎಷ್ಟು ಸೀಲಿಂಗ್ ಇರಬೇಕು ಎಂಬುದನ್ನು ತೋರಿಸಿಕೊಟ್ಟಿದ್ದಾರೆ. 800 ರೂಪಾಯಿ ಖರ್ಚು ಸಲುವಾಗಿ ಇಟ್ಟಿದ್ದಾರೆ 800 ರೂಪಾಯಿ ಬರುತ್ತದೆ ಎಂದಲ್ಲ. ಸ್ವಂತ ಲೇಬರ್ ಎಷ್ಟು ಆಗುತ್ತದೆ ಎಂದು ತಿಳಿದುಕೊಂಡು ಹಾಗೆ ಮಾಡಿದ್ದಾರೆ. 400 ರೂಪಾಯಿ ಇತರ ಖರ್ಚು ಹಾಕಿ ಒಟ್ಟಿಗೆ 1.200 ರೂಪಾಯಿ actual ಆಗಿ ಒಬ್ಬ ಟೆನೆಂಟಿಗೆ ಫ್ಯಾಮಿಲಿ ಹೋಲ್ಡಿಂಗಿಗೆ ಇನ್‌ಕಮ್ ಆಗುತ್ತದೆ. ಹೀಗೆ 1.200 ರೂಪಾಯಿ ಗ್ರಾಸ್ ಸೀಲಿಂಗ್ ಇರಬೇಕು ಎಂದು ಮಾಡಿದ್ದಾರೆ.

ಹೈದರಾಬಾದಿನಲ್ಲಿ ಇದು ಡಿಸ್‌ಕಷನ್ ಆಯಿತು ಪ್ಲಾನಿಂಗ್ ಕಮಿಷನ್ನಿಗೆ ಹೋಯಿತು. ಪ್ಲಾನಿಂಗ್ ಕಮಿಷನ್ ಮೆಂಬರ್ಸ್ ಅಲ್ಲಿಗೆ ಬಂದರು. ನಾವು ಕಾಂಗ್ರೆಸ್ ಪಾರ್ಟಿಯಲ್ಲಿ ವಿಚಾರಮಾಡಿ ಒಂದು ತೀರ್ಮಾನಕ್ಕೆ ಬಂದೆವು. ಒಂದು ಫ್ಯಾಮಿಲಿಗೆ 1.600 ರೂಪಾಯಿ ಗ್ರಾಸ್ ಇನ್‌ಕಂ ಮತ್ತು ಅದರ ಅರ್ಧ ಎಂದರೆ 800 ರೂಪಾಯಿ ನೆಟ್ ಇನ್‌ಕಂ ಇರಬೇಕೆಂದು ಮಾಡಿದ್ದೇವೆ. ಆದರೆ ಈ ಸಮಿತಿಯವರು ಕೆಲವು ಕಡೆ 2.400 ಮತ್ತು 3.600 ಸಹ ಇಟ್ಟಿದ್ದಾರೆ. ಆದ್ದರಿಂದ ಸೀಲಿಂಗ್ ಹಾಕುವಾಗ 3,600 ರೂಪಾಯಿ ಒಂದು ಫ್ಯಾಮಿಲಿಗೆ ಬೇಕು ಎಂದು ಹೇಳುತ್ತಾರೆ.

# ಬಾಂಬೆ ಮತ್ತು ಮೈಸೂರು ಗಡಿ ಹೊಂದಾಣಿಕೆ

**11 ಮಾರ್ಚ್ 1960**

ಪ್ರಾಂತ ಪುನರ್ವಿಂಗಡಣೆಯಾದ ಮೇಲೆ ಬಾರ್ಡರ್ ಅಥವಾ ಗಡಿಯ ವಿಷಯವನ್ನು ನಮ್ಮ ಈ ಸಭೆಯ ಮುಂದೆ ಶ್ರೀ ವೀರಣ್ಣಗೌಡರು ಮತ್ತು ಶ್ರೀ ನಿಜಲಿಂಗಪ್ಪನವರು ತಂದಿದ್ದಾರೆ; ಬಹಳ ಸಂತೋಷ. ಇಂಥ ಕಾಲದಲ್ಲಿ ಈ ವಿಷಯವಾಗಿ ನಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲು ಅವಕಾಶ ಮಾಡಿದ್ದಾರೆ. ಮಹಾರಾಷ್ಟ್ರ ಗಡಿಯ ವಿಷಯದಲ್ಲಿ ಒಂದೇ ಸಮನಾಗಿ ಮಹರಾಷ್ಟ್ರದಲ್ಲಿ ಒಂದು ದೊಡ್ಡ ಕ್ಯಾಂಪೇಯ್ನ್ ಮೈಸೂರಿನ ಬಗ್ಗೆ ನಡೆಯುತ್ತಿದೆ. ಮೊನ್ನೆ ಬೊಂಬಾಯಿಯ ಮುಖ್ಯಮಂತ್ರಿಯವರು ಕೇಂದ್ರಸರ್ಕಾರಕ್ಕೆ ಒಂದು ಮನವಿಯನ್ನು ಕೂಡ ಒಪ್ಪಿಸಿವರೆಂದು ತಿಳಿದು ಬಂದಿದೆ. ಅದರಲ್ಲಿ ಮರಾಠಿ ಜನರಿರುವ 814 ಹಳ್ಳಿಗಳು (ಇವುಗಳ ಜನಸಂಖ್ಯೆ. 4.51. 844) ಮೈಸೂರು ರಾಜ್ಯದಲ್ಲಿವೆ; ಇವು ತಮಗೆ ಬರಬೇಕೆಂದೂ ಹಾಗೂ ಈಗ ಬೊಂಬಾಯಿಗೆ ಸೇರಿರುವ ಕನ್ನಡ ಮಾತನಾಡುವ 2,05,545 ಜನಸಂಖ್ಯೆ ಇರುವ 260 ಹಳ್ಳಿಗಳು ಕರ್ನಾಟಕ್ಕೆ ಅಥವಾ ಮೈಸೂರಿಗೆ ಹೋಗಬೇಕೆಂದೂ ತಿಳಿಸಿದ್ದಾರೆ.

ಒಟ್ಟಿನಲ್ಲಿ ಪ್ರಾಂತ ಪುನರ್ವಿಂಗಡಣೆಯಾದ ಮೇಲೆ ಎಷ್ಟು ಭಾಗ ವಿವಾದಾಸ್ಪದವಾಗಿದೆ ಎನ್ನುವುದರ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ದುರ್ದೈವಶಾತ್ ಅವರು ಇದನ್ನು ಹೇಳುವ ಕಾಲದಲ್ಲಿ ಕರ್ನಾಟಕದ ಭಾಗ ಯಾವುದು ಅಲ್ಲಿ ಉಳಿದಿದೆ ಎಂಬುದನ್ನು ಸಹ ಅವರು ತೋರಿಸಿಕೊಟ್ಟಿದ್ದಾರೆ. ನಿಜವಾದ ಅಂಕಿ ಅಂಶಗಳು ಶ್ರೀಮಾನ್ ಚವಾನ್ ಅವರಿಗೆ ಸಿಕ್ಕಿಲ್ಲವೋ ಏನೋ ಎನಿಸುತ್ತದೆ. ತಾವು ನ್ಯಾಯಪರರು ಎಂದು ತೋರಿಸಲು ಪ್ರಯತ್ನಮಾಡಿದ್ದಾರೆ.

ಮಹಾರಾಷ್ಟ್ರಕ್ಕೆ ಇಷ್ಟು ಭಾಗ ಬರಬೇಕು ಮತ್ತು ಅಲ್ಲಿಂದ ಕರ್ನಾಟಕಕ್ಕೆ ಇಷ್ಟು ಭಾಗ ಹೋಗಬೇಕೆಂದು ಹೇಳಿ, ಉದಾರ ಮನಸ್ಸಿನಿಂದ ತೋರಿಸುತ್ತಿದ್ದಾರೆಂದು ದೇಶದ ಜನರಿಗೆ ಅಭಿಪ್ರಾಯ ಹುಟ್ಟಲಿ ಎಂಬ ಉದ್ದೇಶದಿಂದ, ಈ ದೇಶದ ಜನರಿಗೆ ತಪ್ಪು ತಿಳುವಳಿಕೆ ಬರುವಂತೆ ಮಾಡಿರುವುದು ಅವರ ಮನವಿಯಿಂದ ಕಂಡುಬರುತ್ತದೆ. ಹೈದರಾಬಾದ್ ಭಾಗದಿಂದ ಮೈಸೂರಿಗೆ ಬರುವುದೇನೂ ಇಲ್ಲ. ಮಹಾರಾಷ್ಟ್ರಕ್ಕೆ ಹುಮನಾಬಾದ ತಾಲ್ಲೂಕಿನ 28 ಹಳ್ಳಿಗಳು, ಭಾಲ್ಕಿ ತಾಲ್ಲೂಕಿನ 49 ಹಳ್ಳಿಗಳು, ಸಂತಪುರ ತಾಲ್ಲೂಕಿನಲ್ಲಿ 69 ಹಳ್ಳಿಗಳೂ ಹಾಗೂ ಆಳಂದ ತಾಲ್ಲೂಕು ಬರತಕ್ಕದ್ದಿದೆ ಎಂದು ತಮ್ಮ ಮನವಿಯಲ್ಲಿ ತೋರಿಸಿದ್ದಾರೆ. ಅವರು ಅಂಕಿ ಅಂಶಗಳನ್ನು ಸರಿಯಾಗಿ ನೋಡದಿದ್ದರೆ, ಈಗ ಬೊಂಬಾಯಿಗೆ ಸೇರಿರುವ ತುಳಜಾಪೂರ್, ಉಮರಗ, ದೇಗಲೂರು, ಉದಗಿರ ತಾಲ್ಲೂಕುಗಳಲ್ಲಿ ಕರ್ನಾಟಕ್ಕೆ ಸೇರಬೇಕಾದ ಎಷ್ಟೊ ಹಳ್ಳಿಗಳಿವೆ ಎನ್ನುವುದು ಅವರಿಗೆ ಗೊತ್ತಾಗುತ್ತಿತ್ತು. ದುರ್ದೈವದಿಂದ ಅವರು ದೇಶದ ಎದುರಿಗೆ ತೋರಿಕೆಗಾಗಿ ಕರ್ನಾಟಕಕ್ಕೆ ಬರಬೇಕಾದವು ಇಷ್ಟು ಹಳ್ಳಿಗಳೆಂದು ತಮ್ಮ ಮನವಿಯಲ್ಲಿ

ನಮೂದು ಮಾಡಿದ್ದರೂ ಅವರು ಅಂಕಿ ಅಂಶಗಳನ್ನು ಸರಿಯಾಗಿ ತಿಳಿದುಕೊಳ್ಳದೆ ಈ ರೀತಿ ಮಾಡಿದ್ದಾರೆಂಬುದು ಗೊತ್ತಾಗುತ್ತದೆ. ಒಟ್ಟಿನಲ್ಲಿ ಅವರು ಕೊಟ್ಟಿರುವ ಮನವಿಯಲ್ಲಿ ಸರಿಯಾಗಿಲ್ಲವೆಂದು ನನ್ನ ಸ್ಪಷ್ಟ ಅಭಿಪ್ರಾಯವಾಗಿದೆ.

ಈ ಹಳ್ಳಿಗಳು ಮಹಾರಾಷ್ಟ್ರಕ್ಕೆ ಬರುತ್ತವೆ ಎಂಬ ಅಭಿಪ್ರಾಯವನ್ನು ಅವರು ತೋರಿಸಿಕೊಟ್ಟಿದ್ದಾರೆ. ಇದು ಹೇಗೆ ಬಂತು, ಎಲ್ಲಿಂದ ಬಂತು, ಈ ಅಭಿಪ್ರಾಯದ ಹಿನ್ನೆಲೆ ಏನಿದೆ ಎನ್ನುವುದನ್ನು ನಾವು ನೋಡಬೇಕು. ಶ್ರೀಮಾನ್ ನಿಜಲಿಂಗಪ್ಪನವರು ಈ ವಿಷಯವನ್ನು ಬಹಳ ಚೆನ್ನಾಗಿ ಹೇಳಿದ್ದಾರೆ. ಲೋಕಮಾನ್ಯ ತಿಲಕರ ಜೊತೆಗೆ ಶ್ರೀ ನರಸಿಂಹ ಚಿಂತಾಮಣಿ ಕೇಳಕರ್ ಎನ್ನುವವರು ಒಬ್ಬ ಮಹಾನಾಯಕರು ಇದ್ದರು. ಯಾರ ಕಾಲದಲ್ಲಿ ವರ್ತಮಾನ ಪತ್ರಗಳೇ ಇದ್ದಿಲ್ಲವೋ ಅಂಥ ಕಾಲದಲ್ಲಿ ಕೇಸರಿ ಎಂಬ ಪ್ರಸಿದ್ಧ ಮರಾಠಿ ಪತ್ರಿಕೆಯನ್ನು ಪ್ರಾರಂಭಿಸಿ ಅದರ ಸಂಪಾದಕರು ಅವರು ಆಗಿದ್ದರು.

ಅವರು ಮಹಾರಾಷ್ಟ್ರದಲ್ಲಿ ಪ್ರಸಿದ್ಧರಾದ ನಾಯಕರಾಗಿದ್ದರು. ಅಂಥ ಶ್ರೀ ಕೇಳಕರ ಅವರು ಕೊಟ್ಟಿರ ತಕ್ಕ ಒಂದು ಅವಾರ್ಡು ಇದೆ. ಅದಕ್ಕೆ ಕೇಳಕರ ಅವಾರ್ಡ ಎಂದು ಹೆಸರು. ಈ ಪ್ರಸಿದ್ಧವಾದ ಕೇಳಕರ ಅವಾರ್ಡ್‌ನಲ್ಲಿ ಬಹಳ ಸ್ಪಷ್ಟವಾಗಿ ತೋರಿಸಿಕೊಟ್ಟಿದ್ದಾರೆ. ಅದೇನೆಂದರೆ ಈ ಭಾಗವು ಯಾವ ಪ್ರಾಂತದ್ದಾಗಿದೆ, ಯಾವ ಪ್ರಾಂತಕ್ಕೆ ಸೇರಬೇಕು ಎನ್ನುವುದನ್ನು ಇದರಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಅವರು ಈ ಅವಾರ್ಡು ಕೊಡುವಾಗ್ಗೆ ಇಂದಿನ ದಿವಸ ಇರತಕ್ಕಂಥ ಯಾವುದೇ ಪ್ರಚೋದನೆ ಅಂದು ದೇಶದಲ್ಲಿ ಇರಲಿಲ್ಲ.

ಇವೊತ್ತಿನ ದಿವಸ ಎದ್ದಿರತಕ್ಕಂತ ಭಾಷೆಯ ಪ್ರಶ್ನೆ ಉದ್ರೇಕಗೊಂಡ ವಾತಾವರಣ ಯಾವುದೂ ಇದ್ದಿರಲಿಲ್ಲ. ಇವೊತ್ತಿನ ದಿವಸ ಮನಸ್ಸು ಕೆಡಿಸುವಂಥ ಅಜಿಟೇಶನ್ ಅಂದರೆ ಚಳವಳಿ ಮಾಡತಕ್ಕಂಥ ಕಾಲ ಅದು ಆಗಿರಲಿಲ್ಲ.

ಅಂಥ ಸನ್ನಿವೇಶದಲ್ಲಿ ಅಂಥ ಸಮಯದಲ್ಲಿ ಯಾವ ಯಾವ ಪ್ರದೇಶ ಯಾವ ಭಾಷೆಗೆ ಸಂಬಂಧಪಟ್ಟದ್ದು, ಯಾವ ಯಾವ ಭಾಗವು ಯಾವ ಯಾವ ಜಿಲ್ಲೆಯಲ್ಲಿ ಇರಬೇಕು ಎಂಬುದು ಹೇಳಲ್ಪಟ್ಟಿದೆ. ಅದಕ್ಕನುಸಾರವಾಗಿ ಕಾಂಗ್ರೆಸ್ ಕಮಿಟಿಗಳೂ ಡಿಸ್ಟ್ರಿಕ್ಟ್ ಕಾಂಗ್ರೆಸ್ ಕಮಿಟಿಗಳೂ ರಚಿಸಲ್ಪಟ್ಟವು. ಅದಕ್ಕೆ ಅನುಗುಣವಾಗಿ ಬೆಳಗಾವ್ ಡಿಸ್ಟ್ರಿಕ್ಟ್ ಕಾಂಗ್ರೆಸ್ ಕಮಿಟಿಯು ಕರ್ನಾಟಕ ಭಾಗವೆಂದು ಬಹಳ ಸ್ಪಷ್ಟವಾದ ಶಬ್ದಗಳಲ್ಲಿ ತೋರಿಸಿದ್ದಾರೆ.

ಆ ಕಾಲದಿಂದ ಅದು ಕರ್ನಾಟಕ ಪ್ರದೇಶ ಕಾಂಗ್ರೆಸ್ ಕಮಿಟಿಯ ಆಡಳಿತದ ಕೆಳಗೆ ಇದೆ. ಆ ಕಾಲಕ್ಕೆ ಯಾರೊಬ್ಬರಾದರು ಮಹಾರಾಷ್ಟ್ರದಿಂದ ಬಂದು ಈ ರೀತಿ ಮಾಡಿದ್ದೂ ಸರಿಯಲ್ಲ. ಬೆಳಗಾವ್ ಜಿಲ್ಲೆ ಮಹಾರಾಷ್ಟ್ರಕ್ಕೆ ಹೋಗಬೇಕು ಎಂದು ಯಾರೂ ಹೇಳಲಿಲ್ಲ. ಈ ಬಗ್ಗೆ ಆ ಸಮಯದಲ್ಲಿ ಒಂದು ಚಕಾರ ಶಬ್ದವನ್ನು ಸಹ ಯಾರೂ ತೆಗೆಯಲಿಲ್ಲ. ಬೀದರ್ ಜಿಲ್ಲೆಯು ಆಗಿನಿಂದಲೂ ಕರ್ನಾಟಕಕ್ಕೆ ಸಂಬಂಧ ಪಟ್ಟಿದ್ದೆಂದು ಗೊತ್ತುಮಾಡಲಾಗಿದೆ. ಆದರೆ ಈ ಬೀದರ್ ಜಿಲ್ಲೆಯ ಎರಡು ತಾಲ್ಲೂಕುಗಳು ಮಾತ್ರ ಮಹಾರಾಷ್ಟ ಕಾಂಗ್ರೆಸ್ ಕಮಿಟಿಯ ಕೆಳಗೆ ಹೋಗಬೇಕು ಎಂದು ಆಗಿನ ಕಾಲದಲ್ಲಿಯೇ ಗೊತ್ತಾಯಿತು.

ಈ ರೀತಿ ಪ್ರದೇಶಗಳನ್ನು ವಿಭಾಗ ಮಾಡುವಾಗ ಕಾಂಗ್ರೆಸ್ ಕಮಿಟಿಯವರು ಬಹಳ ಸೂಕ್ಷ್ಮವಾಗಿ ಪರಿಶೀಲನೆ ಮಾಡಿ ದೀರ್ಘವಾಗಿ ಆಲೋಚನೆಮಾಡಿ ನಿರ್ಣಯವನ್ನು ತೆಗೆದುಕೊಂಡಿದ್ದಾರೆ. ಯಾವ ತಾಲೂಕು ಮಹಾರಾಷ್ಟ್ರಕ್ಕೆ ಹೋಗಬೇಕು ಎನ್ನುವುದನ್ನು ಗೊತ್ತು ಮಾಡಲಾಯಿತು. ಅದಕ್ಕನುಸಾರವಾಗಿ ಬೀದರ್ ಜಿಲ್ಲೆಯು ಕರ್ನಾಟಕ ಪ್ರದೇಶದಲ್ಲಿ ಉಳಿದರೂ ಸಹ ಈ ಜಿಲ್ಲೆಯ ಎರಡು ತಾಲ್ಲೂಕುಗಳನ್ನು ಮಾತ್ರ ಮಹಾರಾಷ್ಟ್ರ ಕಾಂಗ್ರೆಸ್ ಕಮಿಟಿಗೆ ಸಂಬಂಧಿಸಲಾಯಿತು.

ಈ ರೀತಿಯಾಗಿ ಇದು ಅಂದಿನಿಂದ ಇಂದಿನವರೆಗೆ ನಡೆದುಕೊಂಡು ಬಂದಿದೆ. ಈ ರೀತಿ ಇರತಕ್ಕ ಹಿನ್ನೆಲೆಯನ್ನು ನಾವು ವಿಚಾರಮಾಡಿ ನೋಡಿದರೆ ಕರ್ನಾಟಕ ಪ್ರದೇಶ ಕಾಂಗ್ರೆಸ್ ಕಮಿಟಿಯ ಆಡಳಿತದ ಕೈ ಕೆಳಗೆ ಬಂದಿರತಕ್ಕ ಎಲ್ಲ ಪ್ರದೇಶವೂ ಕನ್ನಡವಿದ್ದು ಅದು ಕರ್ನಾಟಕದ್ದಾಗಿದೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಈ ರೀತಿ ಆಗ್ಗೆ ವಿಭಾಗವಿದ್ದು ನಿರ್ವಿವಾದವಾಗಿದೆ. ಹೈದರಾಬಾದ್ ಭಾಗದ ಕೆಲವು ವಿಷಯಗಳನ್ನು ಈಗ ಹೇಳಿದರೆ ನಿಮಗೆಲ್ಲರಿಗೂ ಬಹಳ ಆಶ್ಚರ್ಯವಾಗಬಹುದು. ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳ ಕೆಲವೊಂದು ಪ್ರದೇಶಗಳಲ್ಲಿ ಇಂದಿಗೂ ಸಹ ಪ್ರತಿಯೊಬ್ಬ ವ್ಯಾಪಾರಸ್ಥನು ತನ್ನ ವ್ಯಾಪಾರದ ಲೆಕ್ಕ ಪತ್ರಗಳನ್ನು ಪ್ರತಿಯೊಬ್ಬ ಶ್ಯಾನುಭೋಗ ಗೌಡರು ತಮ್ಮ ಹಳ್ಳಿಗೆ ಸಂಬಂಧ ಪಟ್ಟ ಕಾಗದ ಪತ್ರಗಳನ್ನು ಅವರು ಯಾವ ಲಿಪಿಯಲ್ಲಿ ಬರೆದಿಟ್ಟಿದ್ದಾರೆ ಎಂಬುದನ್ನು ನೋಡಬೇಕು.

ಶ್ರೀಮಾನ್ ವಿ.ಎಸ್. ಪಾಟೀಲರು ಹೇಳತಕ್ಕ ಮರಾಠಿ ಭಾಷೆಯಲ್ಲಿ ಅವು ಇರದೆ, ಮೋಡೀ ಲಿಪಿಯಲ್ಲಿ ಬರಯಲ್ಪಟ್ಟದ್ದಾಗಿದೆ. ಪೇಶ್ವೆಯವರ ಕಾಲದಲ್ಲಿ ಒತ್ತಾಯದಿಂದ ಹೇರಲ್ಪಟ್ಟ ಈ ಮೋಡಿ ಲಿಪಿಯಲ್ಲಿಯೇ ಇವೊತ್ತಿನ ದಿವಸ ಸಹ ಅವರು ಬರೆಯುತ್ತಿದ್ದಾರೆ. ಆಗಿನ ಕಾಲದಲ್ಲಿ ಪೇಶ್ವೆ ಸರಕಾರದ ರಾಜ್ಯಾಡಳಿತವು ಆ ಭಾಗದಲ್ಲಿದ್ದಿತು. ಮತ್ತುಅವರ ಆಡಳಿತದ ಭಾಷೆ ಲಿಪಿ ಬಲವಂತದಿಂದ ಹೇರಿದ್ದರಿಂದ ಮರಾಠಿ ಭಾಷೆಯು ಪ್ರಚಾರದಲ್ಲಿ ಬಂದಿತು. ಈ ಪ್ರದೇಶದ ಬಗ್ಗೆ ಇತ್ತೀಚೆಗೆ ಅಂದರೆ 1956ರಲ್ಲಿ ಅದಕ್ಕಾಗಿ ಪೂರ್ವದಲ್ಲಿ ಅಂದರೆ 1948 ರಲ್ಲಿ ಹೈದರಾಬಾದಿನಲ್ಲಿ ಮಂತ್ರಿಗಳಾಗಿದ್ದ ಆ ಶೇಷಾದ್ರಿಯವರು ಪರಿಶೀಲನೆ ಮಾಡಿ ಈ ಪ್ರದೇಶವು ಕರ್ನಾಟಕ ಭಾಗಕ್ಕೆ ಹೋಗಬೇಕೆಂದು ಹೇಳಿದ್ದಾರೆ.

ಕರ್ನಾಟಕ ಮತ್ತು ಮಹಾರಾಷ್ಟ್ರದ ಗಡಿ ಪ್ರದೇಶದಲ್ಲಿರುವ ಗುಲಬರ್ಗಾ ಜಿಲ್ಲೆಯು ಕರ್ನಾಟಕದಲ್ಲಿ ಬಂದಿದೆ. ಇವೊತ್ತಿನ ದಿವಸ ಏನಾಗಿದೆ ಎಂದರೆ ಕೆಲವು ಜನರು ಮುಂದೆ ಬಂದು ಈ ಹಳ್ಳಿಗಳು ಈ ಪ್ರದೇಶದಲ್ಲಿ ಕೂಡದು; ಆ ರಾಜ್ಯಕ್ಕೆ ಬರಬೇಕು ಎಂದು ಹೇಳುತ್ತಿದ್ದಾರೆ. ಇದೆಲ್ಲಾ ಈಗ ಹೇಳುತ್ತಿರುವುದು States Re-organisation Act ಪಾಸ್ ಆಗಿ ಅದು ದೇಶದಲ್ಲಿ ಜಾರಿಗೆ ಬಂದು, ಒಂದು ನಿರ್ಣಯಕ್ಕನುಸಾರವಾಗಿ ವಿಭಾಗ ಮಾಡಿದ ನಂತರ ಈ ರೀತಿ ಅವರು ಹೇಳುತ್ತಿದ್ದಾರೆ. ಈಗ ಈ ರೀತಿ ಹೇಳುವುದರ ಉದ್ದೇಶವೇನಿದೆ, ಹಿನ್ನೆಲೆ ಏನಿದೆ ಎನ್ನುವುದನ್ನು ನಾವು ವಿಚಾರಮಾಡಿ ನೋಡಬೇಕು. ಇದನ್ನು ನಾನು ಸ್ಪಷ್ಟವಾಗಿ ಹೇಳುತ್ತಿದ್ದೇನೆ.

ಈ ವಿಷಯದ ಮೇಲೆಯೇ ಸಂಯುಕ್ತ ಮಹಾರಾಷ್ಟ್ರ ಸಮಿತಿಯು ಜನ್ಮ ತಾಳಿದೆ. ಈ ಸಮಿತಿಯು ಹುಟ್ಟಿದ್ದು ಇದರ ಮೇಲೆ, ಈ ಭಾಷೆಯ ಮೇಲೆ ಉದ್ರೇಕಗೊಂಡು, ಪ್ರಕೋದನೆಮಾಡಿ ಈ ಸಮಿತಿ ಎಂಬ ಸಂಸ್ಥೆಯನ್ನು ಸ್ಥಾಪನೆಮಾಡಿ ಜನರಿಗೆ ಏನೇನೋ ಹೇಳಿಕೊಡುತ್ತಿದ್ದಾರೆ. ಈ ರಾಜ್ಯದಲ್ಲಿ ಈ ಭಾಗ ನಮ್ಮದು, ಆ ಭಾಗ ನಮ್ಮದು ಎಂದು ಪ್ರಚಾರ ಮಾಡುತ್ತಿದ್ದಾರೆ. ಇವೊತ್ತಿನ ದಿವಸ ಹೋರಾಟ ನಡೆಸಿ ಚಳುವಳಿ ಮಾಡುತ್ತಿರುವ ಈ ಪ್ರದೇಶವು ಯಾರದು ಯಾರಿಗೆ ಸೇರಬೇಕು ಎನ್ನುವುದನ್ನು ಹೇಳಿದರೆ ಎಲ್ಲರಿಗೂ ಆಶ್ಚರ್ಯವಾಗಬಹುದು. ಹೈದರಾಬಾದಿನಲ್ಲಿ ಯಾವ ಯಾವ ಭಾಗವು ಮರಾಠ ಆಗಿದೆ, ಮಹಾರಾಷ್ಟ್ರಕ್ಕೆ ಹೋಗಬೇಕು, ಯಾವುದು ಆಂಧ್ರಕ್ಕೆ ಹೋಗಬೇಕು, ಯಾವುದು ತೆಲಂಗಾಣವಾಗಿದೆ ಎನ್ನುವುದಕ್ಕೆ ಅಲ್ಲಿದ್ದ ಸರಕಾರ ಸ್ಟಾಟಿಸ್ಟಿಕ್ಸ್ (ಅಂಕಿ–ಅಂಶ) ತಯಾರುಮಾಡಿತು. ಯಾವ ಪ್ರದೇಶದಲ್ಲಿ ಕನ್ನಡವಿದೆ, ಯಾವುದು ಕರ್ನಾಟಕಕ್ಕೆ ಹೋಗಬೇಕು, ಅದರಂತೆ ಮರಾಠಿ ಪ್ರದೇಶ ಯಾವುದು ಎಂಬುದನ್ನು ನಿರ್ಣಯ ಮಾಡುವುದಕ್ಕಾಗಿ, ಅಸೆಂಬ್ಲಿಯ ಸದಸ್ಯರು ಬೇರೆ ಬೇರೆ ಗ್ರೂಪ್ ಮಾಡಿ ಅವರಿಂದ ಪರಿಶೀಲನೆ ಮಾಡಿಸಿ ಅಂಕಿ ಸಂಖ್ಯೆಗಳ ಆಧಾರದ ಮೇಲೆ ನಿರ್ಣಯ ತೆಗೆದುಕೊಳ್ಳಲಾಗಿದೆ. ಆದರೆ ಈಗ ಮಹಾರಾಷ್ಟ್ರ ಸಮಿತಿಯವರು ಪ್ರಕೋದನೆ ಮಾಡಿ ಈ ಪ್ರದೇಶ ತಮಗೆ ಬರಬೇಕೆಂದು ಹೇಳುತ್ತಿದ್ದಾರೆ. ಅವರು ಮಹರಾಷ್ಟ್ರಕ್ಕೆ ಬರಬೇಕೆಂದು ಹೇಳುತ್ತಿರುವ 28 ಹಳ್ಳಿಗಳಲ್ಲಿ 24 ಹಳ್ಳಿಗಳ ಅಂಕಿ–ಅಂಶಗಳನ್ನು ಪರಿಶೀಲನೆಮಾಡಿ ನೋಡಿದರೆ ನಾನು ಈ ಅಂಕಿ ಅಂಶಗಳನ್ನು ಒದಗಿದ ಬಲ್ಲೆನು. ಈ ತಾಲ್ಲೂಕಿನಲ್ಲಿ ಕನ್ನಡ ಮಾತನಾಡ ತಕ್ಕಂಥವರ ಸಂಖ್ಯೆ ಅಧಿಕವಾಗಿದೆ.

ಇದನ್ನು ನೋಡಿದರೆ ಈ ತಾಲ್ಲೂಕು ಕರ್ನಾಟಕದೆಂದು ಎಲ್ಲರೂ ಒಪ್ಪಿಕೊಂಡಿದ್ದಾರೆ. ಈ ಸಂಬಂಧದಲ್ಲಿ ಒಂದು ರೆಜಲ್ಯೂಷನ್ ಕೂಡ ಪಾಸ್ ಆಯಿತು. ಈ ನಿರ್ಣಯವು ಸರಿಯಾಗಿದೆಯೋ ಎನ್ನುವುದನ್ನು ಕಾಂಗ್ರೆಸ್ ಪಾರ್ಟಿಯವರು, ಉಳಿದ ರಾಜಕೀಯ ಪಕ್ಷದವರು, ರೂಲಿಂಗ್ ಪಾರ್ಟಿಯವರು, ಎಲ್ಲರೂ ಕುಳಿತು ಎಂಟು ದಿವಸಗಳವರೆಗೆ ದೀರ್ಘವಾಗಿ ಚರ್ಚೆಮಾಡಿದರು. ಈ ವಿಷಯವನ್ನು ಡಿಸ್ಟ್ರಿಕ್ಟ್ ಕಾಂಗ್ರೆಸ್ ಕಮಿಟಿಯವರು ಚರ್ಚೆಮಾಡಿದರು. ಎಲ್ಲರೂ ಕುಳಿತು ಸುದೀರ್ಘವಾಗಿ ಆಳವಾಗಿ ಯೋಚನೆಮಾಡಿ ಒಮ್ಮತದಿಂದ ಈ ನಿರ್ಣಯ ಮಾಡಿದರು. ಅನಂತರ ಈ ರಿಆರ್ಗನೈಜೇಷನ್ ಆಯಿತು.

ಕನ್ನಡ ಮಾತನಾಡುವ ಕೆಲವು ಭಾಗಗಳನ್ನು ಆಂಧ್ರದಿಂದ ತೆಗೆದು ಹಾಕಿ ಕರ್ನಾಟಕಕ್ಕೆ ಕೊಟ್ಟಿದ್ದಾರೆ. ಆದರೆ ಈಗ ಮಾತ್ರ ಹೊರಗಿನಿಂದ ಬೇರೆ ರಾಜ್ಯದಿಂದ ಜನಗಳು ಬಂದು ಚಳುವಳಿ ನಡೆಸುತ್ತಾ ಇಷ್ಟು ಹಳ್ಳಿಗಳು ಬರಬೇಕೆಂದು ಕೇಳುತ್ತಿದ್ದಾರೆಯೇ ವಿನಾ ಅಲ್ಲಿಯ ಜನರು ಅಲ್ಲಿ ವಾಸ ಮಾಡಿರತಕ್ಕಂಥ ಪ್ರಜೆಗಳು ಯಾರು ಅವರ ಹಾಗೆ ಹೇಳುತ್ತಿರುವುದಿಲ್ಲ. ಅಲ್ಲಿಯ ಜನರಿಗೆ ಈ ಪ್ರಶ್ನೆ ಸಂಬಂಧವಿಲ್ಲವೇ? ಎಂದು ಕೇಳುತ್ತೇನೆ. ಹೊರಗಿನಿಂದ ಬಂದು ಎಲ್ಲಿಯೋ ಒಂದು ಊರಿನಲ್ಲಿ ಕುಳಿತುಕೊಂಡು ಒಂದು ಸಂಸ್ಥೆಯನ್ನು ಕಟ್ಟಿಕೊಂಡು, ಲಕ್ಷಾವಧಿ ರೂಪಾಯಿಗಳನ್ನು ಶೇಖರಿಸಿ, ಅದನ್ನು ಖರ್ಚುಮಾಡಿ, ಅವರ ಒಳಗಿನ ದುರುದ್ದೇಶ ಗೊತ್ತಿಲ್ಲದೇ ಇರುವ ಮೂಲಕ ನಿರುಪದ್ರವಿ

ಜನರಿಗೆ ಏನೇನೂ ಹೇಳಿ ತಪ್ಪು ಕಲ್ಪನೆ ಉಂಟು ಮಾಡುವ ಪ್ರಚೋದನೆಯನ್ನು ಈ ಸಮಿತಿಯವರು ಮಾಡುತ್ತಿರುವರು.

ಇಂಥ ಕಾರ್ಯದಿಂದ ದೇಶಕ್ಕೆ ಯಾವುದೇ ರೀತಿಯಿಂದ ಕಲ್ಯಾಣವಾಗುವುದಿಲ್ಲ. ದೇಶಕ್ಕೆ ಒಂದು ಸರಿಯಾದ ಮಾರ್ಗ ತೋರಿಸುತ್ತಿಲ್ಲ. ಜನರಿಗೆ ಒಳ್ಳೆಯದಾಗಬೇಕೆಂಬ ಉದ್ದೇಶ ಅವರಿಗಿಲ್ಲ. ತಮ್ಮ ಪಕ್ಷದ ಹಿತ ಸಾಧನೆಗಾಗಿ, ವೈಯುಕ್ತಿವಾಗಿ ಸದಸ್ಯರ ಹಿತ ಮತ್ತು ಪ್ರತಿಷ್ಠೆಗಾಗಿ ಅಜ್ಞರಾದ, ಮೂಕರಾದ ಜನರಲ್ಲಿ ಅಪಪ್ರಚಾರ ಮಾಡಿ ಸ್ವಾರ್ಥಕ್ಕಾಗಿ ಗುಂಡಾಯಿಸಂ ಮಾಡುತ್ತಿದ್ದಾರೆ. ಒಂದು ರಾಜಕೀಯ ಉದ್ದೇಶ ಸಾಧನೆ ಮಾಡುವುದಕ್ಕೋಸ್ಕರ ಪ್ರಯತ್ನಿಸುತ್ತಿದ್ದಾರೆ. ಒಂದು ಉಚ್ಚ ಧ್ಯೇಯ ನೀತಿಯಿಲ್ಲದ ಇಂಥ ಪಕ್ಷದ ಕೆಲಸ ಕಾರ್ಯಗಳನ್ನು ಮುಂಬಯಿ ಮುಖ್ಯ ಮಂತ್ರಿಗಳಾದ ಆ ಚವ್ಹಾಣರವರು ಸಮರ್ಥಿಸಿ ಬೆಂಬಲ ಕೊಡುತ್ತಿರುವುದು ಬಹಳ ವಿಷಾದದ ಸಂಗತಿಯಾಗಿದೆ. ಅದು ಸರಿಯಾದದ್ದಲ್ಲ. ಅವರು ಬಹಳ ಶಾಂತ ರೀತಿಯಿಂದ ವಿಚಾರ ಮಾಡತಕ್ಕ ಪ್ರಶ್ನೆಗಳು ಇವು. ಇವೊತ್ತು ಅಂಕಿ ಅಂಶಗಳನ್ನು ಅವರು ಕೊಟ್ಟಿದ್ದನ್ನೂ ನಾವು ಕೊಟ್ಟಿದ್ದನ್ನೂ ಎರಡನ್ನು ವಿಚಾರಮಾಡಿ ನೋಡಲು ನಮ್ಮಿಂದ ಸಾಧ್ಯವಿಲ್ಲ ಅದಕ್ಕೆ ಮೈಸೂರು ಸರ್ಕಾರದವರು ಜೋನಲ್ ಕೌನ್‌ಸಿಲ್‌ನಲ್ಲಿ ಕುಳಿತು. ಅಭಿಪ್ರಾಯ ತಿಳಿದುಕೊಂಡು, ಅವರು ಹೇಳಿದಂತೆ ಕಮಿಟಿ ನೇಮಕಮಾಡಲು ಒಪ್ಪಿ ಎರಡು ಹೆಸರುಗಳನ್ನು ಸೂಚನೆಮಾಡಿದರು. ಕಮಿಟಿಯನ್ನು ಸಹ ನೇಮಕ ಮಾಡಲಾಗಿದೆ. ಅವರಿಗೆ ಈ ಪ್ರಶ್ನೆಯನ್ನು ಒಪ್ಪಿಸಿದ್ದೇವೆ ಅವರು ತಮ್ಮ ಕೆಲಸವನ್ನು ಮುಂದುವರಿಸಬೇಕಾಗುತ್ತದೆ.

ಅದನ್ನು ಬಿಟ್ಟು. ಇವೊತ್ತು ಮನವಿಯನ್ನು ಕೊಟ್ಟು ನಮಗೆ ಪಾಟಸ್ಕರ್ ಅವಾರ್ಡಿನಂತೆ ಆಗಬೇಕು ವಿಲೇಜ್ ಯೂನಿಟ್ ಕೊಡಬೇಕು. ಕಂಟಿನ್ಯೂಟಿ ಬೇಕು. ಲ್ಯಾಂಗ್ವೇಜ್ ಬೇಸಿಸ್ ಮೇಲೆ ನಿರ್ಧಾರ ಮಾಡಬೇಕು. ಎನ್ನುವಂತಹ Slogan ಏನಿದೆ ಅದನ್ನು ವಿಚಾರಮಾಡಿದ್ದೇ ಆದರೆ ಪಾಟಸ್ಕರ್ ಅವಾರ್ಡಿಗೂ ಮೈಸೂರಿಗೂ ಏನು ಸಂಬಂಧವಿದೆ? ಪಾಟಸ್ಕರ್ ಅವಾರ್ಡ್ ಎಲ್ಲಿ ಬರುತ್ತದೆ ಎಂದರೆ ಮದರಾಸಿನಲ್ಲಿ ತಮಿಳರು ಮತ್ತು ಆಂಧ್ರರು ಒಂದೇ ಪ್ರಾಂತದಲ್ಲಿದ್ದರು. ಅದು ಎರಡು ಪ್ರಾಂತವಾದ ಮೇಲೆ ಎಷ್ಟೋ ಸಾರಿ ಅವರು ಕಲೆತು ವಿಚಾರ ವಿನಿಮಯಮಾಡಿ ಒಂದು ತೀರ್ಮಾನಕ್ಕೆ ಬಂದರು.

ಅದರ ಸಲುವಾಗಿ ಪಾಟಸ್ಕರ್ ಅವಾರ್ಡ್ ಬಂತೇ ಹೊರತು ಮತ್ತೆ ಯಾವುದಕ್ಕೂ ಅಲ್ಲ. ಲ್ಯಾಂಗ್ವೇಜ್ ಬೇಸಿಸ್ ಮೇಲೆ ತೆಗೆದುಕೊಂಡರೆ ರಾಯಚೂರು ತಾಲ್ಲೂಕು ಇದೆ. ಅದರಲ್ಲಿ 40–50 ಹಳ್ಳಿ ಆಂಧ್ರದವರಿಗೆ ಸಿಕ್ಕಬಹುದು. ಇದನ್ನೆಲ್ಲಾ ಸೇರಿಸಿದರೆ ಅವರದು ದೊಡ್ಡ ಪ್ರಾಂತವಾಗಬಹುದು, ಆದರೆ ಕಮ್ಯೂನಿಕೇಷನ್ ದೃಷ್ಟಿಯಿಂದ, ವ್ಯಾಪಾರದ ದೃಷ್ಟಿಯಿಂದ ರಾಯಚೂರಿಗೆ ಬರಲೇಬೇಕಾಗುತ್ತದೆ. ಈಗ ಬೆಳಗಾಂ ವಿಷಯ ತೆಗೆದುಕೊಂಡರೆ, ನನಗಿಂತಲೂ ವಿಶೇಷವಾಗಿ ನಿರ್ದಿಷ್ಟವಾದ ಅಭಿಪ್ರಾಯಗಳನ್ನು ತಿಳಿಸುವಂಥ ಜನರು ಈ ಸಭೆಯಲ್ಲಿ ಇದ್ದಾರೆ. ಆದುದರಿಂದ ನಾನು ಒಂದು ತತ್ವದ ದೃಷ್ಟಿಯಿಂದ ಹೇಳುತ್ತಾ ಇದ್ದೇನೆ.

ಬೆಳಗಾಂವಿಗೆ ಬರತಕ್ಕ ಧಾನ್ಯ, ವ್ಯಾಪಾರಕ್ಕೆ ಬರತಕ್ಕ ಸಾಮಾನುಗಳು ಇವೆಲ್ಲಾ ಎಲ್ಲಿಂದ ಬೆಳಗಾಮಿಗೆ ಬರುತ್ತವೆ? ಸುಮ್ಮನೆ ಕಂಟಿನ್ಯೂಯಿಟಿ ಇದೆ. ಮರಾಠಿ ಮಾತನಾಡುವವರು ಇದ್ದಾರೆ ; ಅದರ ಸಲುವಾಗಿ ಮಹಾರಾಷ್ಟ್ರಕ್ಕೆ ಕೊಡಿರಿ ಎಂದರೆ ಹೇಗೆ ಸಾಧ್ಯವಾಗುತ್ತದೆ? ಆ ರೀತಿ ವಾದದ ದೃಷ್ಟಿಯಿಂದ ವಾದ ಮಾಡುತ್ತ ಕುಳಿತರೆ ನನಗೂ ಸ್ಪಷ್ಟ ಅಭಿಪ್ರಾಯ ಇದೆ; ಚವ್ಹಾನ್ ಸಾಹೇಬರಿಗೆ ಏನೂ ಆಗಲಿಕ್ಕಿಲ್ಲ. ರಾಜಕೀಯದ ಸಲುವಾಗಿ ಬೆಳಗಾವಿಯನ್ನು ಉಪಯೋಗ ಮಾಡಿಕೊಳ್ಳಬಾರದು ಎಂದು ಅವರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

ಈಗ ಮೈಸೂರು ಸರ್ಕಾರದವರು ಮಾಡಿರುವುದು ನಿಜವಾಗಿಯೂ ಶ್ಲಾಘನೀಯವಾದುದು. ಅವರು ಬಿಚ್ಚು ಮನಸ್ಸಿನಿಂದ ಮುಂದುವರೆಸುತ್ತಾ ಇದ್ದಾರೆ. ಶ್ರೀಮಾನ್ ವಿ. ಎಸ್. ಪಾಟೀಲ್ ಅವರು Pockets ಕೊಡುವ ಸಲುವಾಗಿ ಏನು ಹೇಳುತ್ತಾರೆ ಅದನ್ನು ಮುಖ್ಯ ಮಂತ್ರಿಗಳು ಇದ್ದಾರೆ ಮತ್ತು ಅವರು ಮಾಡಿದಂಥ ಕಮಿಟಿಯುರು ಇದ್ದಾರೆ, ಅವರಿಗೆ ಬಿಟ್ಟು ಬಿಡೋಣ. ಶಾಂತವಾತಾವರಣದಲ್ಲಿ ಕುಳಿತು ಮಾತನಾಡುವುದನ್ನು ಬಿಟ್ಟು ಜನರ ಮೇಲೆ ಅತ್ಯಾಚಾರ ನಡೆಸುವುದು, ಬೊಂಬಾಯಿಯಲ್ಲಿ ಹಗಲು, ರಾತ್ರಿ ಮೈಸೂರಿನ ವಿಷಯವಾಗಿ ಒಂದೇ ಸವನೆ ಅಪಪ್ರಚಾರ ನಡೆಸುವುದು. ಇಲ್ಲಿನ ಮುಖ್ಯ ಮಂತ್ರಿಗಳ ವಿಷಯದಲ್ಲಿ ಮನಸ್ಸಿಗೆ ಬಂದ ಹಾಗೆ ಹೇಳಿದ್ದು ಪತ್ರಿಕೆಗಳಲ್ಲಿ ಬಂದಿದೆ.

ನಮ್ಮ ಈ ಗಡಿಯ ಪ್ರಶ್ನೆ ಚೈನಾ ಬಾರ್ಡರ್ ಪ್ರಶ್ನೆ ಆದ ಹಾಗೆ ಆಗುತ್ತಿದೆ. ಚೈನಾದ ಪ್ರಧಾನ ಮಂತ್ರಿಗಳೂ ಸಹ ಇಲ್ಲಿಗೆ ಬಂದು ಮಾತನಾಡುತ್ತೇವೆ ಎನ್ನುವ ಕಾಲದಲ್ಲಿ ಕಹಿ ವಾತಾವರಣವನ್ನುಂಟು ಮಾಡುವುದು ಸರಿಯಲ್ಲ. ಇದಕ್ಕೆ ಅಷ್ಟು ಪ್ರಾಮುಖ್ಯತೆ ಕೊಡಬಾರದು ನೋಡುವವರಿಗೂ, ಕೇಳುವವರಿಗೂ, ಇದೇನು ಈ ರೀತಿ ಆಗುತ್ತಿದೆ ಎಂದು ಆಗಬಾರದು. ಶ್ರೀಮಾನ್ ವಿ.ಎಸ್. ಪಾಟೀಲ್ ಅವರಿಗೆ ಒಂದು ವಿಷಯವನ್ನು ಹೇಳುತ್ತೇನೆ. ಇದರಲ್ಲಿ ಗ್ರೂಪ್ ಪಾಲಿಟಿಕ್ಸ್ ಇದೆ. ಇದು ದೇಶದ ಪ್ರಶ್ನೆ ಆಗಿರಬಹುದು; ಆದರೆ ಇದರಲ್ಲಿ ರಾಜಕೀಯವನ್ನೇಕೆ ತರಬೇಕು. ಕಾಂಗ್ರೆಸ್ ಪಾರ್ಟಿಯಲ್ಲಿ ಭಿನ್ನಾಭಿಪ್ರಾಯ ವಿರಬಹುದು. ಓಟಿನ ವಿಷಯ ಹೇಳಿದರು, ಇಷ್ಟು ಓಟು ಕಾಂಗ್ರೆಸ್ಸಿಗೆ ಇಷ್ಟು ಓಟು ವಿರೋಧ ಪಕ್ಷದವರಿಗೆ, ಕೊಟ್ಟಿದ್ದರು ಎಂದು.

ಅದೇ ಬೇಸಿಸ್ ಮೇಲೆ ಮುಂದೂ ಕೂಡ ಹೋಗುತ್ತಾರೆಯೇ ಎಂದು ಕೇಳುತ್ತಾ ಇದ್ದೇನೆ. ಯಾವುದೇ ವಿಷಯ ಆಗಲಿ ಹಿಂದಿನ ಹಿನ್ನೆಲೆಯಲ್ಲಿ ಮುಂದೆ ಹೋಗಬೇಕು. ಗ್ರೂಪ್ ಪಾಲಿಟಿಕ್ಸ್ ಮೇಲೆ ಜನರು ಹೇಳುತ್ತಾರೆ ಎಂದು ಅವರ ಸಲುವಾಗಿ ಬಾರ್ಡರ್ ವಿಷಯವನ್ನು ನಿರ್ಣಯ ಮಾಡಲಿಕ್ಕೆ ಕುಳಿತರೆ ಯಾವ ಕೊನೆಯನ್ನೂ ಮುಟ್ಟಲಿಕ್ಕೆ ಸಾಧ್ಯವಿಲ್ಲ. ಆ ದೃಷ್ಟಿಯಿಂದ, ಪಾರ್ಲಿಮೆಂಟಿನವರು ಕೂಲಂಕಷವಾಗಿ ವಿಚಾರಮಾಡಿ, ನಿರ್ಣಯಕ್ಕೆ ಬಂದು ಒಂದು ಕಾನೂನು ಮಾಡಿ ಆ ಪ್ರಕಾರ ಪ್ರಾಂತಗಳನ್ನು ವಿಂಗಡಣೆ ಮಾಡಿದ್ದಾರೆ. ಹಾಗಿರುವಾಗ No-Tax compaign ಮಾಡಿದರೆ ಜನರ ಬೇಡಿಕೆ ನೆರವೇರಿದಂತಾಗುತ್ತದೇನು? ಇವ್ವೊತ್ತಿನ ದಿವಸ ಕೇಂದ್ರ ಸರ್ಕಾರದವರುಆದರೂ ಈ ವಾತಾವರಣದಲ್ಲಿ ಯಾವ ನಿರ್ಣಯವನ್ನೂ ಮಾಡಲಿಕ್ಕೂ ಸಾಧ್ಯವಿಲ್ಲ.

ಇಂಥ ವಾತಾವರಣವನ್ನೂ ಉತ್ಪನ್ನ ಮಾಡಿ ದೇಶದ ಬಾರ್ಡರ್ ವಿಷಯಕ್ಕೆ ಒಂದು ನಿರ್ಣಯವನ್ನು ಮಾಡುತ್ತೇವೆಂದು ಹೋದರೆ ಮಾಡುವುದಕ್ಕಾಗುವುದಿಲ್ಲ. ಎಂದು ನನ್ನ ಅಭಿಪ್ರಾಯ ಇದೆ. ಈ ವಿಷಯವಾಗಿ ಮರಾಠಿ ಮಾತನಾಡುವ ಜನರು ಏನು ಹೇಳುತ್ತಾರೋ ಗೊತ್ತಿಲ್ಲ. ಅವರು ತಮ್ಮ ಬೇಡಿಕೆಯನ್ನು ಮುಂದೆ ಇಟ್ಟಿದ್ದಾರೆ. ಅವರು ಮಾಡುವ ಕೆಲಸದಿಂದ ಶಾಂತತೆಯನ್ನು ಉತ್ಪನ್ನ ಮಾಡಲಿಕ್ಕಿಲ್ಲ. ಯಾವ ವಿಷಯ ಅವರಿಗೆ ತಕ್ಕಂತೆ ಆಗುತ್ತದೆ ಎಂಬುದನ್ನು ಹೇಳುವ ಹಾಗಿಲ್ಲ. ದಯವಿಟ್ಟು ಅವರು ಏನಾದರೂ ಕೆಲಸ ಮಾಡಬೇಕಾದರೆ ಸರಿಯಾದ ದಾರಿಯಲ್ಲಿ ಕೆಲಸ ಮಾಡಲಿ. ಈಗ ಸಭೆಯಲ್ಲಿ ಮಂಡಿಸಿರುವ ಪ್ರಸ್ತಾಪವನ್ನು ನಾನು ಒಪ್ಪುತ್ತೇನೆ ಮತ್ತು ಸಪೋರ್ಟ್ ಮಾಡುತ್ತೇನೆ.

# ಅಂತರ್‌ರಾಜ್ಯ ನೀರು ವಿವಾದ ಮಸೂದೆ

**7 ಆಗಸ್ಟ್ 1968**

ನಾನು ಈ ತಿದ್ದುಪಡಿ ಮಸೂದೆ ಬೆಂಬಲಿಸುವುದಕ್ಕೆ ನಿಂತಿದ್ದೇನೆ. ಆದರೆ ಇದರಲ್ಲಿ ಒಂದು ದೊಡ್ಡ ದೋಷ ಉಳಿದಿರುತ್ತದೆ. ಅದು ಏನೆಂದರೆ ಇಂತಹ ಒಂದು ಟ್ರಿಬ್ಯುನಲ್ ಮಾಡುವುದಕ್ಕಾಗಿ ಇದರಲ್ಲಿ ಇಡಲಾಗಿದೆ. ಆದರೆ ಟ್ರಿಬ್ಯುನಲ್‌ನಲ್ಲಿ ಯಾವುದೇ ಪ್ರಕರಣವನ್ನು ಮಂಡಿಸಿದ ಮೇಲೆ ಎಷ್ಟು ದಿನಗಳಲ್ಲಿ ವಿಲೇವಾರಿ ಮಾಡುತ್ತಾರೆ ಎಂಬುದಕ್ಕೆ ನಿರ್ಬಂಧವಿಲ್ಲ.

ನೀವು ನೋಡಬಹುದು ದೇಶದ ಪ್ರಾಜೆಕ್ಟ್‌ಗಳನ್ನು ಪೂರ್ಣಗೊಳಿಸಲು ಭಾರತ ಸರ್ಕಾರದಿಂದ ಎಷ್ಟು ತಡವಾಗುತ್ತದೆಂಬುದು ತಾವು ನೋಡಬಹುದು. ಹೀಗಾಗಿ ನದಿಗಳ ಬಹಳಷ್ಟು ನೀರು ಸಮುದ್ರಕ್ಕೆ ಹೋಗಿ ವೇಷ್ಟಾಗಿ ಬೀಳುತ್ತದೆ. ಕೆಲವು ದಿನಗಳಿಂದ ಸರ್ವೆ ಮಾಡಿ ದೊಡ್ಡ ದೊಡ್ಡ ಪ್ರಾಜೆಕ್ಟ್ ಮಾಡಲಾಗಿದೆ. ನಾನು ನಿಮಗೆ ಹೇಳಬಯಸುವುದೇನಂದರೆ ದೊಡ್ಡ ದೊಡ್ಡ ಪ್ರಾಜೆಕ್ಟ್ ಮಾಡಲಾಗಿದೆ. ಉದಾಹರಣೆಗಾಗಿ : ನಾನು ನಿಮಗೆ ಹೇಳಬಯಸುವುದೇನೆಂದರೆ ಮಾನನೀಯ ಮಂತ್ರೀಜಿ. ಆಂಧ್ರ ಪ್ರದೇಶಕ್ಕೆ ಸಂಬಂಧಿಸಿದ್ದಾರೆ. ಅಲ್ಲಿ ನಾಗಾರ್ಜುನ ಸಾಗರ ಪ್ರಾಜೆಕ್ಟ್ ನಿರ್ಮಿಸಲಾಗಿದೆ. ನಾಗಾರ್ಜುನ ಸಾಗರ ಕೃಷ್ಣ ಕೆಳದಂಡೆ ಹೈದ್ರಾಬಾದ್ ರಾಜ್ಯದಲ್ಲಿತ್ತು. ಕೆಳದಂಡೆ ಕೃಷ್ಣಾಯೋಜನೆ ಸಂಗಡ ಕೃಷ್ಣಾ ಮೇಲ್ದಂಡೆ ಯೋಜನೆ ಕೂಡ 'ಮೂರನೇ ಪ್ಲಾನ್' ನಲ್ಲಿ ಈ ಎರಡು ಪ್ರಾಜೆಕ್ಟ್‌ಗಳನ್ನು ತೆಗೆದುಕೊಳ್ಳಬೇಕೆಂದು ಹೈದ್ರಾಬಾದ ಸರ್ಕಾರ ನಿರ್ಧರಿಸಿತು.

ಇದರಲ್ಲಿ ಒಂದು ಪ್ರಾಜೆಕ್ಟ್ ಪೂರ್ಣಗೊಂಡು ಲಕ್ಷಾಂತರ ಎಕರೆ ಭೂಮಿಯನ್ನು ನೀರಾವರಿಗೊಳಿಸುವುದು. ಆದರೆ ಎರಡನೆಯ ಪ್ರಾಜೆಕ್ಟ್ ಕೃಷ್ಣಾ ಮೇಲ್ದಂಡೆ ಯೋಜನೆ ಇಲ್ಲಿಯವರೆಗೆ ಯಾವುದೇ ಕೆಲಸ ನಡೆಯಲಿಲ್ಲ. ಈ ಬಗ್ಗೆ ಮಾನ್ಯ ಮಂತ್ರಿಗಳು ಹೇಳುವುದೇನೆಂದರೆ ಈ ಪ್ರಾಜೆಕ್ಟ್‌ಗೆ 2 ಕೋಟಿ ರೂಪಾಯಿ ಬಜೆಟ್ ಇಡಲಾಗಿದೆ. ಆದರೆ ಅದು 59 ಕೋಟಿ ರೂಪಾಯಿಗಳ ಪ್ರಾಜೆಕ್ಟ್ ಇರುತ್ತದೆ.

ಅಂದರೆ ಅದು ಎಷ್ಟು ದಿನದೊಳಗೆ ಆಗಬಹುದು? ಯಾವಾಗ ಆಗಬಹುದು? ಈ ಕಡೆ ಅದರ ಕುರಿತು ವಿವಾದ ಪ್ರಾರಂಭವಾಗಿದೆ. ನಮ್ಮ ಮಂತ್ರಿಗಳು ಸ್ವತಃ ಇಂಜಿನೀಯರ್ ಇದ್ದಾರೆ. ಈ ಎಲ್ಲ ಪರಿಸ್ಥಿತಿಗಳನ್ನು ಗಮನಕ್ಕೆ ತೆಗೆದುಕೊಂಡು ಒಂದು ಸಮಯವನ್ನು ನಿರ್ಧರಿಸಬೇಕು,

ಡಾ|| ಜಿ.ಎಸ್. ರಾವ್, ಕ್ರಿ.ಶ. 1941 ಮತ್ತು 1934ರ ಸಮಯದ ಮಾತು. ಈ ಸದ್ಯದಲ್ಲಿ ಮಾತನಾಡುವುದು ಅವಶ್ಯವೆನಿಸುವುದಿಲ್ಲ. ಇವತ್ತಿನ ದೃಷ್ಟಿಯಿಂದ ವಿಚಾರಿಸುವುದು ಅಗತ್ಯವಾಗಿದೆ. ಇವಾಗ ಸಾಕಷ್ಟು ಸಮಸ್ಯೆಗಳು ಬಗೆಹರಿಯುತ್ತಿಲ್ಲ. ಆಂಧ್ರ ಸರ್ಕಾರವೊಂದು ಬೇರೆ ಹೇಳುತ್ತಿದೆ.

ಮೈಸೂರು ಸರ್ಕಾರವು ಒಂದು ಹೇಳುತ್ತಿದೆ. ಮತ್ತು ಬೊಂಬಾಯಿ ಸರ್ಕಾರ ಮತ್ತೊಂದು ರೀತಿಯಲ್ಲಿ ಹೇಳುತ್ತಾರೆ. ಈ ಮೂರು ಸರ್ಕಾರಗಳ ವಿಚಾರಗಳ ರೀತಿಯಲ್ಲಿ ಕೇಂದ್ರ ಸರ್ಕಾರವು ಅವರೊಂದು ರೀತಿಯಲ್ಲಿ ತಮ್ಮ ಅಭಿಪ್ರಾಯ ಹೇಳುತ್ತಾರೆ.

ಕೇಂದ್ರ ಸರ್ಕಾರದಲ್ಲಿ ಒಂದೇ ಪಕ್ಷದ ಮಾತು ನಡೆಯುತ್ತದೆ. ಎಲ್ಲಾ ರಾಜ್ಯಗಳ ಸರ್ಕಾರಗಳು ಒಂದೇ ಪಕ್ಷದ ಆಧೀನದಲ್ಲಿ ನಡೆಯುತ್ತವೆ. ಆದರೆ ಏನುಮಾಡುತ್ತಾರೆ? ಸಾರ್ವಜನಿಕ ಹಣದ ದುರುಪಯೋಗ ಮಾಡುತ್ತಿದ್ದರೆ. ಮತ್ತು ಯಾವುದೇ ರೀತಿಯ ಅಂತಿಮ ತೀರ್ಮಾನ ತೆಗೆದುಕೊಳ್ಳುವುದಿಲ್ಲಾ. ಏಕೆಂದರೆ ನೌಕರ ಶಾಹಿಯ ಪ್ರಾಬಲ್ಯವೇ ಹೆಚ್ಚಾಗಿದೆ. ದೇಶದ ಪರಿಸ್ಥಿತಿಯು ಇದೇ ತರಹ ಮುಂದುವರೆದರೆ ನಾವು ಸುಧಾರಿಸುವುದು ಯಾವಾಗ, ನಾವು ಮಾತನಾಡಿದರೆ ಟೀಕೆ ಮಾಡಿದಂತಾಗುತ್ತದೆ. ಇದರ ಅವಶ್ಯಕತೆ ಇರುವುದರಿಂದ ಇದನ್ನು ಮಾಡಲೇಬೇಕಾಗಿರುತ್ತದೆ.

ಎರಡನೆಯ ವಿಷಯವೆಂದರೆ ದೊಡ್ಡ ದೊಡ್ಡ ಪ್ರಾಜೆಕ್ಟ್ ಯೋಜನೆಗಳಿವೆ. ಕೃಷ್ಣಾ ಮೇಲ್ದಂಡೆ ಯೋಜನೆ ಮೈಸೂರು ರಾಜ್ಯದಲ್ಲಿ ಬರುತ್ತದೆ. ಅದರ ಅಂದಾಜು ವೆಚ್ಚ 59 ಕೋಟಿಗಳಷ್ಟು ಇತ್ತು ಹಾಗೂ ಈಗ ಅದು 100 ಕೋಟಿಗಳವರೆಗೆ ಹೋಗಬಹುದು. ನೂರು ಕೋಟಿಗಳ ಯೋಜನೆಯಲ್ಲಿ ರಾಜ್ಯ ಸರ್ಕಾರವು ಇದರಲ್ಲಿ ಯಾವ ತರಹ 'Contrubution' ಮಾಡಬಹುದು ಸರ್ಕಾರವು ಇದರ ಮೇಲೆ ವಿಚಾರಮಾಡಬೇಕು. ಸರ್ಕಾರದಲ್ಲಿ ದೊಡ್ಡ ದೊಡ್ಡ ಯೋಜನೆಗಳಿವೆ. ಹಾಗೂ ವಿವಿದೊದ್ದೇಶ ಯೋಜನೆಗಳಿಂದ ವಿದ್ಯುತ್ ಉತ್ಪತ್ತಿಯಾಗುತ್ತದೆ. ನೀರಾವರಿಯಾಗುತ್ತದೆ. ಇವುಗಳನ್ನು ರಾಷ್ಟ್ರೀಯ ಯೋಜನೆಗಳೆಂದು ಪರಿಗಣಿಸಿದರೆ ಲಾಭವಾಗುತ್ತದೆ.

ಈ ತರಹ ಆಗಲಾರದ ಪಕ್ಷದಲ್ಲಿ ರಾಜ್ಯಗಳಿಗೆ ತಿಳಿಸಬೇಕೆಂದರೆ ಇದರಲ್ಲಿ ವಿನಾಕಾರಣ ಹಣ ಹಾಕಬಾರದು. ಅಥವಾ ಖರ್ಚು ಮಾಡಬಾರದು. ಅದನ್ನು ಪೂರ್ಣಗೊಳಿಸುವುದು ಸಾಧ್ಯವಿಲ್ಲ. ಈ ಬಗ್ಗೆ ಅನ್ನುವುದೇನೆಂದರೆ ಹೀಗಾಗಲೇ ಎರಡು ಕೋಟಿ ರೂಪಾಯಿ ಖರ್ಚು ಮಾಡಲಾಗಿದೆ ಎಂದು ನೀವು ಹೇಳುತ್ತಿದ್ದೀರಿ. ಅವರ ಹೇಳಿಕೆ ಪ್ರಕಾರ 59 ಕೋಟಿ ರೂಪಾಯಿಗಳ ಯೋಜನೆ ಇದೆ. ಎರಡು ಕೋಟಿ ರೂಪಾಯಿಗಳ ವೆಚ್ಚವಾದರೆ ಆ ಯೋಜನೆಯು ಎಷ್ಟು ದಿನಗಳಲ್ಲಿ ಪೂರ್ತಿಗೊಳ್ಳುವುದು? ಈ ಪ್ರಾಜೆಕ್ಟ್ ಯಾವಾಗ ಪ್ರಾರಂಭವಾಯಿತು? ಇದು ಈ ಯೋಜನೆಯ 19ನೇ ಶತಮಾನದ್ದಾಗಿರುತ್ತದೆ. 1934ರಲ್ಲಿ ಹೈದ್ರಾಬಾದ್ ಸರ್ಕಾರವು ಸರ್ವೆಮಾಡಿಸಿ ಪೂರ್ಣಗೊಳಿಸಿತ್ತು. ಹಾಗೂ ಮೂರನೇಯ ಯೋಜನೆಯಲ್ಲಿ ಸೇರಿಸಲಾಗಿದೆ. ತದನಂತರ ಪುನಃ ವಿವಾದ ಹುಟ್ಟಿತು. 1964ರಲ್ಲಿ ಮೈಸೂರು ಸರ್ಕಾರವು ಕೇಂದ್ರಕ್ಕೆ ಮನವಿ ಸಲ್ಲಿಸಿ ಇದು ವಿವಾದವಿದೆ ಎಂದು ಈಗ 1968ನೇ ಇಸ್ವಿ ಇದೆ. ಇಲ್ಲಿಯವರೆಗೆ ಆಗಿರುವುದಿಲ್ಲಾ. ಇವೆಲ್ಲ ವಿಷಯವನ್ನು ನಾವು ಮಾಡಬೇಕಾಗಿದೆ. ಹಾಗೂ ಇದರ ಬಗ್ಗೆ ಪರಿಹಾರ ಕಂಡುಕೊಳ್ಳಬೇಕಾಗಿದೆ. ಇದು ಬಹಳ ಗಂಭೀರವಾದ ವಿಷಯವಾಗಿದೆ. ದೇಶದ ಪ್ರಗತಿ ಕುಂಠಿತಗೊಂಡಿದೆ. ನೀರು ಸಮುದ್ರಕ್ಕೆ ಹೋಗುವ ಬದಲು ದರ ಉಪಯೋಗವಾಗಬೇಕು. ಈ ಎರಡು ಮಾತುಗಳನ್ನು ಹೇಳುತ್ತಾ ನಾನು ಈ ವಿಷಯಕ್ಕೆ ಬೆಂಬಲ ವ್ಯಕ್ತಪಡಿಸುತ್ತೇನೆ.

ಮರೀಚಿಯೊಳಡಗಿದ ಬಿಸಿಲಿನಂತಿದ್ದಿತ್ತು,
ಕ್ಷೀರದೊಳಡಗಿದ ತುಪ್ಪದಂತಿದ್ದಿತ್ತು,
ಚಿತ್ರಕನೊಳಡಗಿದ ಚಿತ್ರದಂತಿದ್ದಿತ್ತು,
ಆಲಿಯೊಳಡಗಿದ ತೇಜದಂತಿದ್ದಿತ್ತು,
ನುಡಿಯೊಳಡಗಿದ ಅರ್ಥದಂತಿದ್ದಿತ್ತು,
ಕೂಡಲ ಚನ್ನಸಂಗಯ್ಯಾ ನಿಮ್ಮ ನಿಲವು.

- ಚನ್ನಬಸವಣ್ಣ

ಮಂಡೆ ಮಾಸಿದಡೆ ಮಹಾಮಜ್ಜನವ ಮಾಡುವುದು;
ವಸ್ತ್ರ ಮಾಸಿದಡೆ ಮಡಿವಾಳರಿಗಿಕ್ಕುವುದು;
ಮನದ ಮೈಲಿಗೆ ತೊಳೆಯಬೇಕಾದಡೆ,
ಕೂಡಲ ಚೆನ್ನ ಸಂಗಯ್ಯನ ಶರಣರ ಅನುಭಾವವ ಮಾಡುವುದು!

- ಚನ್ನಬಸವಣ್ಣ

# ನನ್ನ ರಾಜಕೀಯ ಗುರು

ರಾಷ್ಟ್ರದ ಅಪ್ರತಿಮ ಸ್ವಾತಂತ್ರ್ಯ ಹೋರಾಟಗಾರ ದಿ: ಕೊಲೂರು ಮಲ್ಲಪ್ಪರವರು, ನಮ್ಮ ಹೈದ್ರಾಬಾದ್ ಕರ್ನಾಟಕ ಭಾಗದ ಗಾಂಧಿಯೆಂದೇ ಹೆಸರಾಗಿದ್ದವರು.

ನನ್ನ ರಾಜಕೀಯ ಜೀವನಕ್ಕೆ ಅಡಿಪಾಯವಿಟ್ಟವರು ಶ್ರೀ ಕೊಲೂರು ಮಲ್ಲಪ್ಪರವರು. ನನ್ನ ಇಂದಿನ ರಾಜಕೀಯ ಅಸ್ತಿತ್ವಕ್ಕೆ ಶ್ರೀಯುತರು ನೀಡಿದ ಮಾರ್ಗದರ್ಶನ ಹಾಗೂ ಪ್ರೇರಣೆಯೇ ಕಾರಣ.

ಸ್ವಾತಂತ್ರ್ಯ ಹೋರಾಟಗಾರರಾಗಿ ರಾಷ್ಟ್ರಕ್ಕೆ ಸಲ್ಲಿಸಿದ ಸೇವೆ ಅನನ್ಯ. ಜೊತೆಜೊತೆಯಲ್ಲಿಯೇ ಕರ್ನಾಟಕದಲ್ಲಿ ಕಾಂಗ್ರೆಸ್ ಪಕ್ಷವನ್ನು ಕಟ್ಟಲು ಶ್ರಮಿಸಿದ ಶ್ರೀಯುತರು, ಪಕ್ಷದ ಅಧ್ಯಕ್ಷರಾಗಿ, ಸುರಪುರ ಹಾಗೂ ಸೇಡಂ ಕ್ಷೇತ್ರದ ಶಾಸಕರಾಗಿ ಹಾಗೂ ಮೂರು ಬಾರಿ ರಾಜ್ಯಸಭಾ ಸದಸ್ಯರಾಗಿ ಸೇವೆ ಸಲ್ಲಿಸಿದವರು. ದಿವಂಗತ: ಪಂಡಿತ್ ನೆಹರು ರವರಿಗೆ ಹಾಗೂ ಶ್ರೀಮತಿ ಇಂದಿರಾಗಾಂಧಿ ರವರಿಗೆ ಅತೀ ಆತ್ಮೀಯರಾಗಿದ್ದರು.

ಇಂತಹ ಮಹಾನ್ ವ್ಯಕ್ತಿಯ ಜೀವನ ಚರಿತ್ರೆಯನ್ನೊಳಗೊಂಡ ಕೃತಿಯನ್ನು ಪ್ರೋ ಗಂಗಾಧರಯ್ಯ ಹಿರೇಮಠ ರವರ ಬರಹದಲ್ಲಿ ಹೊರತರಲು ಅವಕಾಶ ಮಾಡಿಕೊಟ್ಟ ಸರ್ಕಾರಕ್ಕೂ ನನ್ನ ಅಭಿನಂದನೆಗಳು.

ಶ್ರೀಯುತರ, ಜೀವನ ಸಾಧನೆ, ಪ್ರಾಮಾಣಿಕತೆ ಹಾಗೂ ಅವರ ನಿಷ್ಕಲ್ಮಶ ಸೇವೆಯನ್ನು ಇಂದಿನ ಯುವ ರಾಜಕೀಯ ನಾಯಕರಿಗೆ ಹಾಗೂ ಯುವ ಪೀಳಿಗೆಗೆ ಮಾರ್ಗದರ್ಶನವಾಗಲು, ಉತ್ತಮವಾಗಿ ಮೂಡಿಬರಲೆಂದು ಆಶಿಸುತ್ತೇನೆ.

- ಎನ್. ಧರ್ಮಸಿಂಗ್
ಮಾಜಿ ಮುಖ್ಯಮಂತ್ರಿಗಳು,
ಕರ್ನಾಟಕ ಸರ್ಕಾರ

# ರಾಜಕೀಯ ಮುತ್ಸದ್ದಿ ಮಲ್ಲಪ್ಪನವರು

ಕರ್ನಾಟಕದ ಅಪರೂಪದ ರಾಜಕಾರಣಿ, ರಾಜಕೀಯ ಮುತ್ಸದ್ದಿ ಶ್ರೀ ಕೊಲೂರು ಮಲ್ಲಪ್ಪನವರು ಹೈದ್ರಾಬಾದ್ ವಿಮೋಚನಾ ಚಳುವಳಿಯಲ್ಲಿ ಪ್ರಮುಖ ರೂವಾರಿಯಾದ ಇವರು ತಮಗೆ ಬಂದ ನೋವನ್ನು ಬದಿಗಿಟ್ಟು ಈ ಭಾಗವನ್ನೂ ನಿಜಾಮರಿಂದ ಸ್ವಂತಂತ್ರ್ಯ ಪಡೆಯಲು ಕಾರಣ ಕರ್ತರಾಗಿದ್ದಾರೆ.

ಪಂಡಿತ ನೆಹರು, ಡಾ!! ರಾಜೇಂದ್ರಪ್ರಸಾದ್ ಶಾಸ್ತ್ರೀ ಮುಂತಾದ ರಾಷ್ಟ್ರನಾಯಕರ ಆತ್ಮೀಯ ಬಳಗದಲ್ಲಿ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡರು. ಎರಡು ಬಾರಿ ಶಾಸಕರಾಗಿ ಮೂರು ಬಾರಿ ರಾಜ್ಯಸಭಾ ಸದಸ್ಯರಾಗಿ ಕಾರ್ಯನಿರ್ವಹಿಸಿದರು. ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿ ಪಕ್ಷವನ್ನು ಕಟ್ಟಿ ಬೆಳೆಸಿದ ಸಮರ್ಥ ವ್ಯಕ್ತಿತ್ವ ಇವರದು ಮಹಾತ್ಮಗಾಂಧೀಜಿಯವರ ಪ್ರಭಾವದಿಂದ ಸತ್ಯ,ಪ್ರಮಾಣಿಕತೆ, ಸರಳ ಜೀವನವನ್ನು ಮೈಗೂಡಿಸಿಕೊಂಡು, ದೀನ, ದುರ್ಬಲರ ಅಲ್ಪ ಸಂಖ್ಯಾತರ ಅಭಿವೃದ್ಧಿಗಾಗಿ ಶ್ರಮಿಸಿದರು. ಸದನದಲ್ಲಿ ಅನೇಕ ಪ್ರಮುಖ ವಿಷಯಗಳನ್ನು ಚರ್ಚಿಸಿ ಅವುಗಳ ಪರಿಹಾರಕ್ಕೆ ಸರ್ಕಾರಕ್ಕೆ ಸಲಹೆ ಸೂಚನೆಗಳನ್ನು ನೀಡಿ ಉತ್ತಮ ಸಂಸದೀಯ ಪಟು ಎಂಬ ಹೆಗ್ಗಳಿಕೆಗೆ ಪಾತ್ರರಾದರು.

ನನ್ನ ತಂದೆ ದಿ!! ಬಾಪುಗೌಡ ದರ್ಶನಾಪೂರಿಗೆ ರಾಜಕೀಯ ಮಾರ್ಗದರ್ಶಕರಾಗಿದ್ದ ಮಲ್ಲಪ್ಪನವರು ರಾಜಕಾರಣವನ್ನು ಸಮಾಜ ಸೇವೆಗೆಂದು ಬಳಸಿಕೊಂಡ ಇವರು ಹೈದ್ರಾಬಾದ್ ಕರ್ನಾಟಕದ ಬೆಳವಣಿಗೆಗಾಗಿ ಚಿಂತಿಸಿದರು. ಅವರ ಅಭಿವೃದ್ಧತರ ಚಿಂತನೆ ಹಾಗೂ ತತ್ವಗಳು ಇಂದು ನಮಗೆಲ್ಲ ಮಾರ್ಗದರ್ಶನ ನೀಡುವಂತಿವೆ.

- ಶರಣಬಸಪ್ಪಗೌಡ ದರ್ಶನಾಪೂರ

ಕೃಷಿಮಾರುಕಟ್ಟೆ ಸಚಿವರು,

ಕರ್ನಾಟಕ ಸರ್ಕಾರ

# ಕಟ್ಟಾ ಗಾಂಧೀವಾದಿ

ಕೊಲೂರು ಮಲ್ಲಪ್ಪನವರು ಹೈದ್ರಾಬಾದ್ ವಿಮೋಚನೆ ಹೋರಾಟದಲ್ಲಿ ಪ್ರಮುಖವಾಗಿ ಭಾಗವಹಿಸಿದ್ದಾರೆ ಅಲ್ಲದೆ ಸಕ್ರಿಯ ರಾಜಕಾರಣದಲ್ಲಿ ತೊಡಗಿ ಮಹತ್ವದ ಕಾರ್ಯಗಳನ್ನು ಮಾಡಿದ್ದಾರೆ ಗಾಂಧೀಜಿಯ ತತ್ವಗಳನ್ನು ತಮ್ಮ ಬದುಕಿನಲ್ಲಿ ಆಚರಣೆಯಲ್ಲಿ ತಂದವರು ಕೊಲೂರರು.

ಹೈದ್ರಾಬಾದ್ ಕರ್ನಾಟಕ ಪ್ರದೇಶದ ಅಭಿವೃದ್ಧಿಗಾಗಿ ಚಿಂತನೆ ಗೈದರು ಸತ್ಯ, ಪ್ರಾಮಾಣಿಕತೆಯನ್ನು ರೂಢಿಸಿಕೊಂಡು ಸಾಮಾಜಿಕ ಕಳಕಳಿಯಿಂದ ದೀನರ, ಹಿಂದುಳಿದವರ ಬಗ್ಗೆ ಅಪಾರ ಕಾಳಜಿಹೊಂದಿ ಅವರ ಪ್ರಗತಿಗೆ ಸದಾ ಚಿಂತಿಸಿದರು.

ರಾಜಕಾರಣವನ್ನು ಸಮಾಜ ಸೇವೆಗಾಗಿ ಬಳಸಿಕೊಂಡ ಅಪರೂಪದ ರಾಜಕಾರಣಿ ಇವರಾಗಿದ್ದಾರೆ. ಇಂತಹ ಉನ್ನತ ವಿಚಾರಗಳುಳ್ಳ, ಸಮಾಜ ಸೇವೆಯ ಗುಣವುಳ್ಳ ವ್ಯಕ್ತಿಯ ಜೀವನ ಸಾಧನೆಯು ಇಂದಿನ ಯುವ ನಾಯಕರಿಗೆ ರಾಜಕಾರಣಿಗಳಿಗೆ ಮಾರ್ಗದರ್ಶನವಾಗಬಲ್ಲದು.

- ಟಿ.ಎಂ ಹುಂಡೇಕಾರ
ಮಾಜಿ ಅಧ್ಯಕ್ಷರು,
ಜಿಲ್ಲಾ ಪುನರ್ ವಿಂಗಡಣಾ ಸಮಿತಿ
ಕರ್ನಾಟಕ ಸರ್ಕಾರ

# ರಾಷ್ಟ್ರಮಟ್ಟದಲ್ಲೂ ಕಾಣಿಸಿಕೊಂಡ ಗಟ್ಟಿ ನಾಯಕ

ಕೊಲೂರು ಮಲ್ಲಪ್ಪ ಎಲ್ಲರೂ ಬಲ್ಲಂತೆ ಹಿಂದುಳಿದ ಜನವರ್ಗ (ಕುರುಬ ಜನಾಂಗ) ದಿಂದ ಒಬ್ಬ ಜನನಾಯಕ. ಮುಂದುವರಿದ ಕೋಮುಗಳಿಗೆ ಸೇರಿದೆ ಬ್ರಾಹ್ಮಣ, ಲಿಂಗಾಯಿತ ಜನಾಂಗದವರ ಪ್ರಾಬಲ್ಯವೇ ಇಲ್ಲಿ ಹೆಚ್ಚುವರಿಯಾಗಿದ್ದಾಗಲೂ ಯಾರ ಸಹಾಯವನ್ನು ತಡೆಯದೆ ಹೈದ್ರಾಬಾದ್ ಕರ್ನಾಟಕದ ಉದ್ದಕ್ಕೂ ತಾನೊಬ್ಬನೇ ತನ್ನ ಸ್ವಂತದ ಕೋಲನ್ನು ಊರಿಕೊಂಡು, ಯಾರಿಗೇನು ಕಮ್ಮಿ ಇಲ್ಲದಂತೆ ರಾಜ್ಯಮಟ್ಟದಲ್ಲಿ ಹೇಗೋ ರಾಷ್ಟ್ರಮಟ್ಟದಲ್ಲೂ ಕಾಣಿಸಿಕೊಂಡ ಒಬ್ಬಗಟ್ಟಿನಾಯಕ ಶ್ರೀ ಕೊಲೂರು ಮಲ್ಲಪ್ಪ ಸ್ವಾತಂತ್ರ್ಯ ಹೋರಾಟದಲ್ಲಿ ಯಾವ ಉತ್ಸಾಹದಿಂದ ತೊಡಗಿದ್ದರೋ ಅದೇ ಥರ ತರುವಾಯದ ಹೈದ್ರಾಬಾದ್ ವಿಮೋಚನಾ ಚಳುವಳಿಯಲ್ಲಿಯೂ ಮುಂಚೂಣಿಯ ನಾಯಕನಾಗಿ ಭಾಗವಹಿಸಿದ ಈ ನಿಸ್ವಾರ್ಥ ಹೋರಾಟಗಾರ ಅನೇಕ ಕಷ್ಟ ನಷ್ಟಗಳಿಗೆ ಗುರಿಯಾದುದು ಸಹಜವೇ ಆಗಿತ್ತು. ಮನೆ ಯಾರು ತೊರೆಯಬೇಕಾಗಿ ಬಂತು ಜೈಲು ಶಿಕ್ಷೆ ಅನುಭವಿಸಬೇಕಾಗಿ ಬಂತು. ಪೋಲಿಸರ ಲಾಟಿ ಪೆಟ್ಟು ಬಿದ್ದವು ಆದರೂ ತಮ್ಮ ವಿಜುಗೀಷು ವೃತ್ತಿಯನ್ನು ಬಿಡಲಿಲ್ಲ ಹೋರಾಟದಿಂದ ಹಿಂದೆ ಸರಿಯಲಿಲ್ಲ ಹಳ್ಳಿ ಹಳಗ್ಳಿಗೆ ಹೋಗಿ ಯುವಕರನ್ನು ಸಜ್ಜು ಗೊಳಿಸುತ್ತಿದ್ದ ಅವರ ಅಂದಿನ ಕಾರ್ಯ ಇಂದಿಗೂ ರೋಮಾಂಚಕ!

ತಮ್ಮ ತಾರುಣ್ಯದ ದಿನಗಳಲ್ಲಿ ಮಹಾತ್ಮಗಾಂಧೀಜಿ ಅವರಿಂದ ಆಕರ್ಷಿತರಾಗಿದ್ದ ಮಲ್ಲಪ್ಪನವರು ಅವರ ಆದರ್ಶಗಳನ್ನೇ ನೆಚ್ಚಿಕೊಂಡು ಜೀವನ ಸಾಗಿಸಿದ್ದು ಗಮನಾರ್ಹವಾದುದು ಶಾಸಕರಾಗಿ ರಾಜ್ಯ ಸಭಾ ಸದಸ್ಯರಾಗಿ ಸೇವೆಮಾಡುವ ಅವಕಾಶ ದೊರೆತಿದ್ದರು ಇಂದಿನ ಅನೇಕರಂತೆ ಅದನ್ನೊಂದು ಪುಢಾರಿ ದಂದೆಯನ್ನಾಗಿ ಮಾಡಿಕೊಳ್ಳದೆ ಅದು ದೇಶ ಸೇವೆಗೆ ದೊರೆತ ಒಂದು ಅಪೂರ್ವ ಅವಕಾಶ ಎಂದು ಬಗೆದದ್ದು ಅವರ ಮತ್ತೊಂದು ವಿಶೇಷವೆನ್ನಬಹುದು ಕಾಲ ಎಷ್ಟೇ ಬದಲಾದರೂ ಪರಿಸರ ಎಷ್ಟೇ ಕುಲಗೆಟ್ಟು ಹೋಗಿದ್ದರು ತಮ್ಮ ದೇಶ ನಿಷ್ಠೆ ಹಾಗೂ ಸ್ವಾರ್ಥತ್ಯಾಗದ ಭಾವನೆಗಳಿಗೆ ಕಿಂಚಿತ್ತೂ ಚ್ಯುತಿ ತಂದುಕೊಂಡಿಲ್ಲದ ಈ ಗಾಂಧಿವಾದಿ ಕೊಲೂರು ಮಲ್ಲಪ್ಪನವರು ನಿಜಕ್ಕೂ ಹೈದ್ರಾಬಾದ ಕರ್ನಾಟಕ ಓರ್ವ ಅಪರೂಪದ ರಾಜಕಾರಣಿ ಎನ್ನಬಹುದು.

- ಲಿಂಗಣ್ಣ ಸತ್ಯಂಪೇಟೆ
ಸಂಪಾದಕರು, ಬಸವಮಾರ್ಗ,
ಶಹಾಪುರ

# ದಕ್ಷ ನೇತಾರ

ಕೊಲೂರು ಮಲ್ಲಪ್ಪನವರನ್ನು ನಾನು ಕಂಡಂತೆ ಹೇಳಬೇಕಾದರೆ ಅವರ ವ್ಯಕ್ತಿತ್ವದಬಗ್ಗೆ ಶಬ್ದಗಳೇ ಸಾಲವು. ಅವರೊಬ್ಬ ಈ ಭಾಗದ ದಕ್ಷ ನೇತಾರರು. ಭಾರತ ಸ್ವಾತಂತ್ರ್ಯ ಸಂದರ್ಭದಲ್ಲಿ ಮಲ್ಲಪ್ಪನವರು ಈ ಭಾಗದಿಂದ ಹೋರಾಟ ಮಾಡಿ ಬಂಧಿತರಾದವರಲ್ಲಿ ಮೊದಲಿಗರು. ಅಂದು ನಾನು ವಕೀಲ ವೃತ್ತಿಮಾಡುತ್ತಿದ್ದೆ. ಮಲ್ಲಪ್ಪನವರು ನನ್ನ ಸ್ನೇಹಿತರಾಗಿದ್ದರು. ಚಿಕ್ಕಂದಿನಲ್ಲಿಯೇ ತಂದೆಯ ಆದರ್ಶ ಗುಣಗಳನ್ನು ಮೈಗೂಡಿಸಿ ಕೊಂಡಿದ್ದ ಅವರು ಗಾಂಧೀಜಿಯವರ ದರ್ಶನದ ನಂತರ ಅವರ ತತ್ವಗಳ ಆಚರಣೆಗೆ ಬದ್ಧರಾದರು.

ಕಾಲಚಕ್ರ ಅವರ ಬದುಕಿನಲ್ಲಿ ಅಪಾರ ನೋವು ತಂದೊಡ್ಡಿತು. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ಮರುದಿನವೇ ಮಲ್ಲಪ್ಪನವ ರ್ಧರ್ಮಪತ್ನಿ ಕೊನೆಯುಸಿರೆಳೆದರು. ಜೈಲಿನ ಅಧಿಕಾರಿಗಳು ಅಂತ್ಯಕ್ರಿಯೆಗೆ ಬಿಡಲಿಲ್ಲ. ಸ್ವತಃ ಗೃಹಮಂತ್ರಿಯವರೇ ಗುಲ್ಬರ್ಗಾಕ್ಕೆ ಬಂದು ಬಿಡಲು ಆದೇಶ ಮಾಡಿ ಹೋದರು. ಬಿಡುಗಡೆಯಾದ ಮಲ್ಲಪ್ಪನವರು ಕುಟುಂಬದ ಸದಸ್ಯರನ್ನೇ ಬೇಟಿಯಾಗಿ ಹೈದ್ರಾಬಾದ್ ವಿಮೋಚನಾ ಚಳುವಳಿ ಎಂಬ ಎರಡನೆಯ ಸ್ವಾತಂತ್ರ್ಯ ಹೋರಾಟಕ್ಕೆ ಸಿದ್ಧರಾಗಬೇಕಾಯಿತು.

ಏಕೆಂದರೆ ಖಾಸೀಂ ರಜವಿಯಿಂದ ಬೆಂಬಲ ಪಡೆದು ರಜಾಕರರ ಪಡೆಗಳು ಜನತೆಯನ್ನು ಶೋಷಣೆ ಮಾಡತೊಡಗಿದ್ದರು. ಕೊಲೂರು ಮಲ್ಲಪ್ಪನವರು ಎಲ್ಲಾ ಪಡಿ ಶಿಬಿರಗಳ ಉಸ್ತವಾರಿ ನೋಡಿಕೊಳ್ಳುತ್ತಿದ್ದರು. ದಕ್ಷ ನೇತಾರರಾಗಿದ್ದ ಅವರು ಈ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತರಾಗುತ್ತಿದ್ದರು. ಹೈದ್ರಬಾದ ಕರ್ನಾಟಕದ ವಿಮೋಚನೆಯ ನಂತರ ಶ್ರೀ ಮಲ್ಲಪ್ಪನವರು ಶಾಸಕರಾಗಿ, ಕಂಗ್ರೆಸ್ ಪಕ್ಷದ ಅಧ್ಯಕ್ಷರಾಗಿ, ರಾಜ್ಯ ಸಭಾ ಸದಸ್ಯರಾಗಿ ಅಪ್ಪಟ ಗಾಂಧಿ ವಾದಿಯಾಗಿ ಸೇವೆ ಸಲ್ಲಿಸಿದ್ದಾರೆ. ತಮ್ಮ ತತ್ವಗಳಿಗೆ ಬದ್ಧರಾಗಿ ಇಂದು ರಾಜಕೀಯ ವಿಶ್ರಾಂತಿಯನ್ನು ಹೊಂದಿ ಕುಷ್ಟರೋಗಿಗಳಿಗೆ ಭವಿಷ್ಯ ಕೊಡುವ ದಿಸೆಯಲ್ಲಿ ಚಿಂತಿಸುತ್ತಿರುವ ಅವರು ನಿಜವಾಗಿಯೂ ಸಾಮಾಜಿಕ ಸುಧಾರಣೆಯ ನೇತಾರರೆಂದೇ ಹೇಳಬೇಕು.

– ಭೀಮಸೇನರಾವ್ ಇಮಾರತ್
ಸ್ವಾತಂತ್ರ್ಯ ಹೋರಾಟಗಾರರು, ಮತ್ತು ವಕೀಲರು,
ಯಾದಗಿರಿ.

# ಸ್ವಾತಂತ್ರ್ಯ ಸೇನಾನಿ

ಮಾನ್ಯ ಕೊಲೂರು ಮಲ್ಲಪ್ಪನವರನ್ನು ನಾನು ಕಂಡಂತೆ ಹೇಳಬೇಕಾದರೆ ಅವರೊಬ್ಬ ಸ್ವಾತಂತ್ರ್ಯ ಸೇನಾನಿಯನ್ನಬಹುದು. ಗಾಂಧೀಜಿಯ ನಾಯಕತ್ವದಲ್ಲಿ ಚಳುವಳಿ ನಡೆದಾಗ ಅದರ ಪ್ರಭಾವ ಮಲ್ಲಪ್ಪನವರ ಮೇಲಾಗಿ ಅವರು ಈ ಭಾಗದಲ್ಲಿ ಚಳುವಳಿ ನಡೆಸಿ 1940–1942 ರಲ್ಲಿ ಬಂಧಿತರಾದರು. ಹೈದ್ರಾಬಾದ್ ಪ್ರದೇಶದಲ್ಲಿಯೇ ಸ್ವತಂತ್ರ್ಯ ಹೋರಾಟಕ್ಕಾಗಿ ಬಂಧಿತರಾದ ಮೊದಲ ವ್ಯಕ್ತಿ ಇವರೆಂಬುದು ದಿಟ. ಇವರನ್ನೇ ಮೂರನೆಯ ಸಲ ಬಂಧಿಸಿದಾಗ ಜೇಲಿನಲ್ಲಿ ದೈಹಿಕವಾಗಿ ನೋವುಂಡರು. ಮುಂದೆ ಬಿಡುಗಡೆಯಾದ ಅವರು ಸ್ವಾತಂತ್ರ್ಯಕ್ಕೆ ಹೊಸ ರೂಪನೀಡಿದರು.

ಪತ್ನಿಯ ಮರಣ, ಅವರ ಅಂತ್ಯಕ್ರಿಯೆಯಲ್ಲಿ ಭಾಗವಹಿಸದಿದ್ದರೂ ಮಲ್ಲಪ್ಪನವರು ವಿಚಲಿತರಾಗದೆ ಸಮರ್ಥ ಸೇನಾನಿಯಂತೆ ಮನಸ್ಸು ಗಟ್ಟಿ ಮಾಡಿಕೊಂಡು ರಜಾಕಾರರ ದಾಳಿಯನ್ನು ಪಡೆಯಲು ಗಡಿ ಶಿಬಿರಗಳನ್ನು ವ್ಯವಸ್ಥಿತವಾಗಿ ಸಂಘಟಿಸಿ ಅದರ ಉಸ್ತುವಾರಿಯನ್ನು ಮಾಡಿದರು. ಇದರ ಹೋರಾಟ ಹೈದ್ರಾಬಾದ್ ಕರ್ನಾಟಕದ ತುಂಬೆಲ್ಲ ಹರಡಿತು. ವಿಮೋಚನೆಯ ನಂತರ ಮಲ್ಲಪ್ಪನವರು ಹೈದ್ರಾಬಾದ್ ಪ್ರದೇಶ ಕಂಗ್ರೆಸ್ ಕಮಿಟಿಯ ಅಧ್ಯಕ್ಷರಾಗಿ, ಶಾಸಕರಾಗಿ, ರಾಜ್ಯ ಸಭಾಸದಸ್ಯರಾಗಿ ಅಪಾರ ಸೇವೆಸಲ್ಲಿಸಿದ್ದಾರೆ. ಇವರ ಪರಿಶ್ರಮದಿಂದ ಕಾಂಗ್ರಸ್ ಪಕ್ಷ ಈ ಭಾಗದಲ್ಲಿ ಜನಪ್ರಿಯವಾಗಿತ್ತು. ಇತ್ತೀಚೆಗೆ ಅವರು ಹದಗೆಟ್ಟಿರುವ ರಾಜಕೀಯ ವ್ಯವಸ್ಥೆಯಿಂದ ದೂರವಿದ್ದು ಕುಷ್ಟರೋಗಿಗಳಿಗಾಗಿ ಚಿಂತಿಸಿ ಅವರಿಗೆ ಹೊಸ ಬದುಕನ್ನು ಕೊಡುವ ನಿಟ್ಟಿನಲ್ಲಿ ಮಾಡಿದ ಅವರ ವಿಚಾರಗಳು ಅನನ್ಯವಾದುದಾಗಿದೆ.

**– ನರಸಪ್ಪ ಗೌಡ ದರಿಯಾಪೂರ**

ಸ್ವಾತಂತ್ರ್ಯ ಹೋರಾಟಗಾರರು.

# ಗಾಂಧಿ ತತ್ವ ಪರಿಪಾಲಕ

ಶ್ರೀ ಮಲ್ಲಪ್ಪ ಕೊಲೂರು ಬಗ್ಗೆ ಹೇಳಬೇಕಾದರೆ ಮೊದಲು ಬರುವ ನುಡಿಯೇ ಕಟ್ಟಾಗಾಂಧಿವಾದಿ. ಶ್ರೀಯುತರು 1934ರಲ್ಲಿ ಗಾಂಧೀಜಿಯವರನ್ನು ಸಾಬರಮತಿ ಆಶ್ರಮದಲ್ಲಿ ಭೇಟಿಯಾದ ನಂತರ ಬದುಕಿನಲ್ಲಿ ಅವರ ವಿಚಾರಗಳನ್ನು ಅಳವಡಿಸಿಕೊಂಡು ಬಂದರು. ಭಾರತ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆದಿದ್ದಾಗ ಇದು ಮಲ್ಲಪ್ಪನವರನ್ನು ಆಕರ್ಷಿಸಿತು. ಅವರು ಭಾರತ ಬಿಟ್ಟು ತೊಲಗಿ ಚಳುವಳಿಯ ಸಂದರ್ಭದಲ್ಲಿ ಯಾದಗಿರಿಯಲ್ಲಿ ಬಂಧಿತರಾದರು. ಅವರನ್ನು ಗುಲ್ಬರ್ಗಾ ಜೈಲಿಗೆ ವರ್ಗಾಯಿಸಿದರು. ಅಷ್ಟೋತ್ತಿಗಾಗಲೇ ಅವರು ಪ್ರಭಾವ ನನ್ನ ಮೇಲೆ ಆಗಿತ್ತು. ಕಾಂಗ್ರೆಸ್ಸಿನ ಪ್ರಮುಖ ಮುಖಂಡರಾಗಿದ್ದ ಅವರು ಸ್ವಾತಂತ್ರ್ಯ ಅಂದೋಲನದ ಮುಂಚೂಣಿಯ ನಾಯಕರಾಗಿದ್ದರು. ಅವರ ಜೊತೆ ಅಂದು ಜಗನ್ನಾಥರಾವ್ ಚಂಡ್ರಕಿ, ಚಟ್ನಳ್ಳಿ ಈರಣ್ಣ, ಪರ್ವತರೆಡ್ಡಿ ಎಲೇರಿ, ವಿರುಪಾಕ್ಷಪ್ಪ ಎಕ್ಕೇಳ್ಳಿ ನಾವೆಲ್ಲ ಸೇರಿ ಶ್ರೀ ಮಲ್ಲಪ್ಪನವರ ನಾಯಕತ್ವದಲ್ಲಿ ಹೋರಾಟಕ್ಕೆ ಇಳಿದೆವು. ಮಲ್ಲಪ್ಪನವರ ಹೋರಾಟವು ಸ್ವಾತಂತ್ರ್ಯ ಸಮಾನತೆಗಾಗಿ, ನಿಜಾಮ ಸರಕಾರದ ನೀತಿಯ ವಿರುದ್ಧವಾಗಿತ್ತೆ ವಿನಃ ಮುಸ್ಲಿಂ ಜನರ ವಿರುದ್ಧವಾಗಿರಲಿಲ್ಲ.

ಮಲ್ಲಪ್ಪನವರ ದೃಷ್ಟಿ ವಿಶಾಲವಾಗಿತ್ತು. ಹಿಂದು ಮುಸ್ಲಿಂರನ್ನು ಸಮಾನ ದೃಷ್ಟಿಕೋನದಿಂದ ನೋಡುತ್ತಿದ್ದರು. ಬಹಳಷ್ಟು ಜನ ಮುಸ್ಲಿಂ ಬಂಧುಗಳು ಅವರ ಆತ್ಮೀಯ ಸ್ನೇಹಿತರಾಗಿದ್ದರು. ಆದರೆ ದಿನದಿನಕ್ಕೆ ಬೆಳೆಯುತ್ತಿರುವ ಮಲ್ಲಪ್ಪನವರ ವ್ಯಕ್ತಿತ್ವ ಕಂಡು ಸಹಿಸಲಾಗದ ನಿಜಾಮ ಸರಕಾರದ ಅಧಿಕಾರಿಗಳಿಗೆ ಇದು ಹಿಡಿಸಲಿಲ್ಲ. ಹೀಗಾಗಿ ಸುಳ್ಳು ಆರೋಪದ ಮೇಲೆ 1940ರಲ್ಲಿ ಅವರನ್ನು ಬಂಧಿಸಲಾಯಿತು. ಬಿಡುಗಡೆಯಾದ ಅವರು ಮತ್ತೆ 1982–47ರಲ್ಲಿ ಬಂಧಿತರಾದರು. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಾಗ ಮಲ್ಲಪ್ಪನವರು ಗುಲಬರ್ಗಾ ಜೇಲಿನಲ್ಲಿದ್ದರು. ಆಗ ಅವರ ಪತ್ನಿ ತೀರಿಕೊಂಡರು ಶವಸಂಸ್ಕಾರಕ್ಕೆ ಬಿಡಲಿಲ್ಲ.

ಗೃಹಮಂತ್ರಿಯ ಆದೇಶದಂತೆ ಪೆರೋಲ್ ಮೇಲೆ ಬಿಡುಗಡೆಯಾದ ಇವರು ಗದಗ ಶಿಬಿರಕ್ಕೆ ಹೋಗಿ ಭೇಟಿಕೊಟ್ಟು ಎಲ್ಲಾ ಕಡೆ ಗಡಿ ಶಿಬಿರಗಳನ್ನು ಸ್ಥಾಪಿಸುವ ಬಗ್ಗೆ ಜನಾರ್ದನರಾವ್ ದೇಸಾಯಿಯವರ ಜೊತೆ ಚರ್ಚಿಸಿ ಕೊನೆಗೆ 16 ಕಡೆ ಶಿಬಿರ ಸ್ಥಾಪಿಸಲಾಯಿತು. ಅವುಗಳ ಮೇಲ್ವಿಚಾರಣೆಯನ್ನು ಮಲ್ಲಪ್ಪನವರು ಮತ್ತು ದೇಸಾಯಿಯವರು ಮಾಡಿದರು. ಅಂದು ರಜಾಕಾರರ ಹಾವಳಿಯನ್ನು ತಡೆಯಲು ಈ ಗಡಿ ಶಿಬಿರಗಳು ಹುಟ್ಟಿಕೊಂಡಿದ್ದವು. 1948ರಲ್ಲಿ ಪೊಲೀಸ್ ಕಾರ್ಯಾಚರಣೆಯ ನಂತರ ನಿಜಾಮ ಶರಣಾಗತಿಯನ್ನು ಸೂಚಿಸಿದನು.

ಮಲ್ಲಪ್ಪನವರ ಹೋರಾಟದ ಬಗ್ಗೆ ಹೇಳಬೇಕಾದರೆ ಶಾಂತಿಯುತ ಹೋರಾಟಕ್ಕೆ ಯಶಸ್ಸು ಸಿಗುತ್ತದೆ. ಎಂಬ ಅವರ ಮಾತಿನಲ್ಲಿ ಅದೆಷ್ಟು ಕಟ್ಟಾ ಗಾಂಧೀವಾದಿ ಅಂಶ ಮನೆಮಾಡಿದೆ ಎಂಬುದು ಅರಿತುಕೊಳ್ಳಬಹುದು. ಸ್ವಾತಂತ್ರ್ಯನಂತರ ಶ್ರೀ ಮಲ್ಲಪ್ಪನವರು ಸುರಪುರ ಮತ್ತು ಸೇಡಂ ಶಾಸಕರಾಗಿ ಕಾಂಗ್ರೆಸ್ ಪಕ್ಷವನ್ನು ಕಟ್ಟಿಬೆಳೆಸಿದರು. ಶಾಸಕತ್ವದ ಅವಧಿಯಲ್ಲಿ ಪ್ರಾಮಾಣಿಕವಾಗಿ ಕ್ಷೇತ್ರಕ್ಕೆ ದುಡಿದರು. ಅಂದು ಮಲ್ಲಪ್ಪನವರು ಯಾವ ಹುದ್ದೆ ಬಯಸಿದರೂ ಸಿಗುತ್ತಿತ್ತು. ಏಕೆಂದರೆ ರಾಜಕೀಯ ಸಂಬಂಧ ಉನ್ನತ ಮಟ್ಟದಲ್ಲಿ ಅವರಿಗಿತ್ತು. ಅಧಿಕಾರದ ಹಿಂದೆ ಅವರು ನಿವೃತ್ತರಾಗಿ ಕುಷ್ಟರೋಗಿಗಳಿಗೆ ದಾರಿ ತೋರಿಸುವ ಕಾರ್ಯದಲ್ಲಿ ಮಗ್ನರಾಗಿದ್ದಾರೆ. ನಿಜವಾಗಿಯೂ ಅವರು ಕಟ್ಟಾ ಗಾಂಧಿವಾದಿಯಾಗಿದ್ದಾರೆಂದು ಹೇಳಬಹುದು.

**– ಜಗದೇವಪ್ಪ ಹಾಲಭಾವಿ**

ಸ್ವಾತಂತ್ರ್ಯ ಹೋರಾಟಗಾರರೂ ಯಾದಗಿರಿ.

# ಮಾನವತಾವಾದಿ

ಕೊಲೂರು ಮಲ್ಲಪ್ಪನವರನ್ನು ಮಾನವತಾವಾದಿ ಎಂದು ಗುರುತಿಸಬಹುದಾಗಿದೆ. ಏಕೆಂದರೆ ಭಾರತ ಸ್ವಾತಂತ್ರ್ಯ ಹೋರಾಟ ಮತ್ತು ಹೈದ್ರಾಬಾದ್ ವಿಮೋಚನಾ ಚಳುವಳಿಯಲ್ಲಿ ಹೋರಾಡಿದ ಬಗೆಯನ್ನು ಚಿಕ್ಕವನಿದ್ದಾಗ ನನಗೆ ನನ್ನ ತಂದೆಯವರು ಹೇಳುತ್ತಿದ್ದರು. ಆವಾಗಿನಿಂದಲೇ ಮಲ್ಲಪ್ಪನವರ ವ್ಯಕ್ತಿತ್ವದ ಪರಿಚಯ ನನಗಾಯಿತು. ಮುಂದೆ ಚಿ॥ ನನ್ನ ಮಗ ದೇವೇಂದ್ರಪ್ಪಗೌಡ ಅವರ ಮೇಲೆ ಎಂ.ಫಿಲ್. ಅಧ್ಯಯನ ಮಾಡಲು ವಿಷಯ ಆಯ್ಕೆ ಮಾಡಿಕೊಂಡಿದ್ದೇನೆ ಎಂದರು. ಆಗ ನನಗಾದ ಸಂತೋಷಕ್ಕೆ ಪಾರವೇ ಇರಲಿಲ್ಲ.

ಹಲವಾರು ಸಲ ನಾನು ಮಗನ ಜೊತೆ ಮಲ್ಲಪ್ಪನವರನ್ನು ಬೇಟಿಯಾಗಲು ಹೋಗಿದ್ದಾಗ ಅವರ ಹೋರಾಟದ ಚಿತ್ರಣ, ರಾಜಕೀಯ ಅನುಭವಗಳು, ಸ್ವಾತಂತ್ರ್ಯ ಚಳುವಳಿಯಲ್ಲಿ ಉಂಡ ನೋವು, ಪ್ರಸಕ್ತ ಪರಿಸ್ಥಿತಿಯಲ್ಲಿ ಅವರು ಜೀವಿಸಿ ವಿಧಾನ, ಅಪ್ಪಟ ಗಾಂಧಿವಾದ ತತ್ವಗಳ ಕಟ್ಟುನಿಟ್ಟಿನ ಆಚರಣೆ ಎಲ್ಲವು ಪ್ರಭಾವ ಬೀರುವಂತೆ ಆಗಿವೆ. ಇಂದಿನ ಯುವಶಕ್ತಿಗೆ ಅವರೇಳುವ ಸಂದೇಶಗಳು ಮಾರ್ಗದರ್ಶಿಯಾಗಿವೆ. ತಮ್ಮ ಜೀವನದ ಅರವತ್ತು ವರ್ಷಗಳ ರಾಜಕೀಯದಲ್ಲಿ ಯಾವುದೇ ಆರೋಪವನ್ನು ಹೊಂದಿರದ ಸರಳ ವ್ಯಕ್ತಿತ್ವದ ಸಾದಾ ಜೀವಿಯಾದ ಶ್ರೀ ಮಲ್ಲಪ್ಪನವರು ಯಾವ ಮಾನವತಾವಾದಿಗಳಿಗೇನು ಕಮ್ಮಿ ಇಲ್ಲದ ವ್ಯಕ್ತಿತ್ವವನ್ನು ಪಡೆದವರಾಗಿದ್ದಾರೆ. ಎಂದು ಹೇಳಿದರೆ ಉತ್ಪ್ರೇಕ್ಷೆ ಎನಿಸಲಾರದು. ಇವರು ಇಂದಿನ ಪೀಳಿಗೆಗೆ ಮಾದರಿಯಾಗಿದ್ದಾರೆ.

– ವೆಂಕಣ್ಣಗೌಡ ಮಾಲಿಪಾಟೀಲ,
ಬಿದರಾಣಿ

# ಹೈದ್ರಾಬಾದ್ ಕರ್ನಾಟಕದ ಗಾಂಧಿ

ಭಾರತದ ಸ್ವಾತಂತ್ರ್ಯ ಮತ್ತು ಹೈದ್ರಾಬಾದ್ ವಿಮೋಚನೆ ಚಳುವಳಿಯಲ್ಲಿ ಹೈದ್ರಾಬಾದ್ ಕರ್ನಾಟಕದಲ್ಲಿ ಹೋರಾಡಿದ ನಾಯಕರ ಸರಮಾಲಿಕೆಯಲ್ಲಿ ಕೊಲೂರು ಮಲ್ಲಪ್ಪನವರು ಅಗ್ರಗಣ್ಯರು. ಬಾಲ್ಯದಲ್ಲಿಯೇ ಹೋರಾಟದ ಮನೋಭಾವನೆಯನ್ನು ಬೆಳಸಿಕೊಂಡ ಮಲ್ಲಪ್ಪನವರು ಮುಂದೆ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಭಾಗಿಯಾಗಿದ್ದರು.

ಅಂದು ಖ್ಯಾತ ವಕೀಲರಾಗಿದ್ದ ಜನಾರ್ದನರಾವ ದೇಸಾಯಿ ಇವರು ಕೂಡಿ ಕಾಂಗ್ರೆಸ್ ಪಕ್ಷ ಸೇರಿ ಎಲ್ಲ ರಂಗದಲ್ಲಿ ಕುಸಿಯುತ್ತಿರುವ ಆಡಳಿತ ಯಂತ್ರ ಸರಿಪಡಿಸಲು ನಿಜಾಮ ಸರಕಾರವನ್ನು ಒತ್ತಾಯಿಸಿದರು. ಕಾಸಿಂರಜದಿಯ ಕೈಗೊಂಬೆಯಾಗಿದ್ದ ನಿಜಾಮ ಈ ನಾಯಕರ ಮಾತಿಗೆ ಪ್ರತಿಕ್ರಿಯಿಸದೆ ಮೌನವಹಿಸಿದ್ದು ಮಲ್ಲಪ್ಪನವರು ಮತ್ತು ದೇಸಾಯಿಯವರು ಹೋರಾಟದ ಚೌಕಟ್ಟನ್ನು ಕಟ್ಟಲು ಪ್ರೇರಣೆ ನೀಡಿದಂತಾಯಿತು, ಮಲ್ಲಪ್ಪನವರು ಹಾಗೂ ದೇಸಾಯಿಯವರು ಒಗ್ಗೂಡಿ ಸಾಬರಮತಿ ಆಶ್ರಮಕ್ಕೆ ಹೋಗಿ ಗಾಂಧೀಜಿಯ ದರ್ಶನ ಪಡೆದು ಅವರಿಂದ ಪ್ರಭಾವಿತರಾಗಿ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದರು.

ಅಪಾರ ಜನಸ್ತೋಮದಿಂದ ಕೂಡಿ ಹೋರಾಟ ನಡೆಸುವುದನ್ನು ಕಂಡು ಹೆದರಿ ಕೆರಳಿದ ನಿಜಾಮ ಸರಕಾರದ ಅಧಿಕಾರಿಗಳು ಮಲ್ಲಪ್ಪನವರು ಸರಕಾರಿ ಅಧಿಕಾರಿಗಳಿಗೆ ಹೆದರಿಸುತ್ತಾರೆಂದು ಆರೋಪ ಪಟ್ಟಿ ನಿಜಾಮ ಕಳಿಸಿದರು. ಅವರು ಮಲ್ಲಪ್ಪನವರನ್ನು 1940ರಲ್ಲಿ ಯಾದಗಿರಿಯಲ್ಲಿ ಬಂಧಿಸಿದರು. ಕೆಲವು ತಿಂಗಳ ಶಿಕ್ಷೆ ಅನುಭವಿಸಿದ ಅವರು ಮುಂದೆ ಬಿಡುಗಡೆಯಾಗಿ ಬರುವಷ್ಟರಲ್ಲಿಯೇ ಅವರ ಮನೆಯ ಕಾಗದ ಪತ್ರಗಳು ನಿಜಾಮ ಸರಕಾರದ ಅಧಿಕಾರಿಗಳಿಂದ ಅಗ್ನಿಗೆ ಆಹುತಿಯಾದವು.

ಈ ಭಾಗದಲ್ಲೆಲ್ಲ ಸಂಚರಿಸಿ ಯುವಕ ಮಿತ್ರರನ್ನು ಸಂಘಟಿಸಿ, ಸಂಘಟನೆಯ ನೇತೃತ್ವವನ್ನು ಅವರೆಲ್ಲರ ಒಪ್ಪಿಗೆಯ ಮೇರೆಗೆ ವಹಿಸಿ ಹೈದ್ರಾಬಾದ್ ಪ್ರದೇಶವನ್ನು ವಿಮೋಚನೆಗೊಳಿಸಲು ವಿವಿಧ ವಿಷಯಗಳನ್ನೊಳಗೊಂಡ ಮನವಿ ಪತ್ರವನ್ನು ನಿಜಾಮ ಸರಕಾರಕ್ಕೆ ಕಳಿಸಿದರು. ದುಷ್ಟಬುದ್ಧಿಯ ಕಾಶಿಮ್‌ರಜವಿ ಈ ಪತ್ರಕ್ಕೆ ಮನ್ನಣೆ ಸಿಗದಮತೆ ಮಾಡಿ ತನ್ನ ದುಷ್ಟಕೃತ್ಯವನ್ನು ಬಿಡದೆ ತನ್ನ ಹಿಂಬಾಲಕರೊಂದಿಗೆ ನಡೆಸಿದನು. ಇದೇ ಸಮಯದಲ್ಲಿ ಗಾಂದೀಜಿಯವರ ಮುಖಂಡತ್ವದಲ್ಲಿ ಬ್ರಿಟಿಷರೆ ಭಾರತ ಬಿಟ್ಟು ತೊಲಗಿರಿ ಎಂಬ ಚಳುವಳಿಯು ಆರಂಬವಾಗಿತ್ತು. ಇದರ ಪ್ರಭಾವ ಈ ಭಾಗದ ಮೇಲೆ ವಿಶೇಷವಾಗಿ ಶ್ರೀ ಮಲ್ಲಪ್ಪನವರ ಮೇಲೆ ಆಯಿತು. ಅವರ ಪ್ರಭಾವಕ್ಕೊಳಗಾದ ಮಲ್ಲಪ್ಪನವರು ಹೋರಾಟವನ್ನು ತೀವ್ರಗೊಳಿಸಿದರು. ಈ ಸಂದರ್ಬದಲ್ಲಿ ಅವರನ್ನು ಯಾದಗಿರಿಯಲ್ಲಿ ಬಂದಿಸಿದರು. ಆಗ ಜೈಲಿನಲ್ಲಿ ಅಧಿಕಾರಿಗಳು ದೈಹಿಕವಾಗಿ ಶಿಕ್ಷಿಸಿದರು. ಗಟ್ಟಿ ಮನಸ್ಸಿನ ಮಲ್ಲಪ್ಪನವರು ಯಾವುದಕ್ಕೂ ಹೆದರಲಿಲ್ಲ. ಮತ್ತೆ ಬಿಡುಗಡೆಯಾಗಿ ಬಂದರು. ಅಷ್ಟೊತ್ತಿಗಾಗಲೇ ಮಲ್ಲಪ್ಪನವರ

ಪ್ರಭಾವ ನನ್ನ ಮೇಲೆ ಆಗಿತ್ತು. ನಾನು ಅವರ ಕಾರ್ಯಕರ್ತರಲ್ಲಿ ಒಬ್ಬನಾಗಿ ಸೇರಿಕೊಂಡಿದ್ದೆ. ಶ್ರೀ ಮಲ್ಲಪ್ಪನವರು ಅಂದು ಹೈದ್ರಾಬಾದ್ ಪ್ರದೇಶಗಳಲ್ಲಿಯೇ ಮುಂಚೂಣಿಯ ಸ್ಥಾನದಲ್ಲಿ ಇದ್ದರೆಂದು ಹೇಳಬಹುದು. ಅಂದು ರಜಾಕಾರರ ಪಡೆಗಳು ಗ್ರಾಮ ಪಟ್ಟಣಗಳಲ್ಲಿ ತಮ್ಮ ವಕ್ರ ದೃಷ್ಟಿಯನ್ನುಬೀರಿ, ಜನತೆಗೆ ಅಪಾರ ತೊಂದರೆ ನೀಡಿ ಅವರ ನೆಮ್ಮದಿಯ ಬದುಕಿಗೆ ಕಂಟಕರಾಗಿದ್ದರು. ನಮ್ಮ ಈ ಭಾಗದಲ್ಲಿ ನೇತಾರರಾಗಿದ್ದ ಶಾಂತಿದೂತ ಮಲ್ಲಪ್ಪನವರಿಗೆ ಇದು ಸರಿ ಕಾಣಲಿಲ್ಲ. ಅದನ್ನು ವಿರೋಧಿಸಲು ಯಾವಾಗಲೂ ನೀವು ಸಿದ್ಧರಿಸಬೇಕು ಎಂದು ಕಾರ್ಯಕರ್ತರನ್ನು ಉದ್ದೇಶಿಸಿ ಹೇಳುತ್ತಿದ್ದರು. ಆದರೆ ಹೋರಾಟ ಶಾಂತಿಯಿಂದ ಕೂಡಿರಬೇಕು. ಎಂದು ಹೇಳುತ್ತಿದ್ದರು. ಆಗ ಯಾದಗಿರಿಯಲ್ಲಿ ಮಲ್ಲಪ್ಪನವರ ಜೊತೆಯಲ್ಲಿ ಸಹ ಹೋರಾಟಗಾರರಾಗಿ ವಿರೂಪಾಕ್ಷಪ್ಪ ಎಕ್ಕಳ್ಳಿ. ಜಗನ್ನಾಥರಾವ್ ಚಂಡ್ರಿಕಿ, ಭೀಮಸೇನ್‌ರಾವ್ ಹಿಮಾರತ್ ಜಗದೇವಪ್ಪ ಹಾಲಬಾವಿ, ಇನ್ನು ಅನೇಕ ತರುಣರು ಮಲ್ಲಪ್ಪನವರ ಜೊತೆ ಹೋರಾಟದಲ್ಲಿ ಭಾಗಿಯಾಗಿದ್ದರು. ಮಲ್ಲಪ್ಪನವರಿಗೆ ಸ್ವಾತಂತ್ರ್ಯ ಸಿಕ್ಕದ್ದು ಒಂದು ಸಂತೋಷವೆನಿಸಿದರ. ಇತ್ತ ಕಡೆ ನಿಜಾಮ ಈ ಪ್ರದೇಶವನ್ನು ವಿಮೋಚನೆಗೊಳಿಸದೇ ಇದ್ದದ್ದು ಬೇಸರ ತರಿಸಿತ್ತು.

ಇದೇ ಸಮಯಲ್ಲಿ 16ನೆಯ ಆಗಷ್ಟು ಅವರ ಜೀವನದಲ್ಲಿ ನೋವು ತರಿಸುವ ಘಟನೆ ನಡೆದುಹೋಯಿತು. ಅವರ ಪತ್ನಿ ಕೊನೆಯುಸಿರೆಳೆದರು. ಕಟುಕ ಮನಸ್ಸಿನ ಜೈಲರನು ಮಲ್ಲಪ್ಪನವರನ್ನು ಶವಸಂಸ್ಕಾರಕ್ಕೆ ಬಿಡಲಿಲ್ಲ. ಅಂದಿನ ಗೃಹಮಂತ್ರಿಗೆ ಆದಾರು ವಿಷಯ ತಿಳಿಸಿದರೋ? ಏನೂ ಅವರು ನೇರವಾಗಿ ಗುಲ್ಬರ್ಗಾಕ್ಕೆ ಬಂದು ಸಾಂತ್ವನ ಹೇಳಿ 10 ದಿವಸ ಬಿಡುಗಡೆಗೊಳಿಸಲು ಆದೇಶ ಮಾಡಿ ಹೋದರು. ಇದು ಸಣ್ಣ ವಿಷಯವೇನಲ್ಲ! ತಮ್ಮ ಜೀವನದ ಜ್ಯೋತಿಯೊಂದು ನಂದಿಹೋಗಿದ್ದರೂ ಗಟ್ಟಿ ಮನಸ್ಸಿನಿಂದ ಗೃಹಮಂತ್ರಿಗೆ ಇದು ಕಳೆದ ಸಂಗತಿ, ಇದು ಮತ್ತೆ ಮತ್ತೆ ನೆನಪು ಮಾಡುವುದರಿಂದ ಏನನ್ನೂ ನಿರೀಕ್ಷಿಸಲು ಸಾಧ್ಯವೇ ನೀವೇ ಹೇಳಿರಿ? ಎಂದು ಪ್ರಶ್ನಿಸಿದ ಅವರ ಮಾತು ಯಾವ ಗಾಂಧಿಗೇನು ಕಡಿಮೆಇಲ್ಲ.

ಬಿಡುಗಡೆಯಾದ ಮಲ್ಲಪ್ಪನವರು ನೇರವಾಗಿ ಹೆಂಡತಿಯ ಸಮಾಧಿ ಇರುವ ಗ್ರಾಮ ರಾಂಪುರಕ್ಕೆ ಹೋಗಿ, ಅತ್ತೆಯವರನ್ನು ಸಮಾಧಾನಪಡಿಸಿ, ಪತ್ನಿಯ ಸಮಾಧಿಯ ಮೇಲೆ ಪುಷ್ಪಗುಚ್ಛ ವಿರಿಸಿ ಮತ್ತೆ ಹೋರಾಟಕ್ಕಿಳಿಯಲು ಮನಸ್ಸು ಗಟ್ಟಿಮಾಡಿಕೊಂಡರು. ಇವರು ಬಿಡುಗಡೆಯಾದ ಸುದ್ದಿ ಕಾಳ್ಗಿಚ್ಚಿನಂತೆ ಹಬ್ಬಿ ಕಾತ್ಯಕರ್ತರಾದ ನಾವು ಅವರನ್ನು ಸುತ್ತುವರಿದು ಹೋರಾಟದ ಮುಂದಿನ ರೂಪರೇಷೆಗಳನ್ನು ಸಿದ್ಧಗೊಳಿಸಲು ವಿನಂತಿಸದೆವು ಅಷ್ಟೋತ್ತಿಗಾಗಲೇ ಅವರು, ಜನಾರ್ದನರಾವ್ ದೇಸಾಯಿ ಗಡಿಶಿಬಿರಗಳನ್ನು ಸ್ಥಾಪಿಸುವ ಬಗ್ಗೆ ಚರ್ಚಿಸಿದ್ದರು.

ಶ್ರೀ ಮಲ್ಲಪ್ಪನವರು ಗಡಿ ಶಿಬಿರಗಳನ್ನು ಗಡಿಗುಂಟ ಸ್ಥಾಪಿಸಿದರು. ಅವು ಸುಮಾರು 16 ಕಡೆ ರೆತೆಯಲಾಯಿತು. ನಾನು ಮಹೇಂದ್ರಿಗೆ ಶಿಬಿರದಲ್ಲಿ ಕೆಲಸ ಮಾಡುತ್ತಿದ್ದೆ ಮಲ್ಲಪ್ಪನವರು ಎಲ್ಲಗಡಿ ಶಿಬಿರಗಳ ಮೇಲ್ವಿಚಾರಕರಾಗಿ ಸಂಚರಿಸುತ್ತಾ ಸೂಕ್ತ ಮಾರ್ಗದರ್ಶನ ಮಾಡುತ್ತಿದ್ದರು. ಇವರ ಜೊತೆಯಲ್ಲಿ ಆರ್ಯ ರಮಾನಂದ ತಿರ್ಥರು ಕೂಡ ಸಂಚರಿಸುತ್ತಿದ್ದರು.

ಅಂದು ರಜಾಕಾರರ ಅಪಾರ ತೊಂದರೆಗೆ ಅವರು ಒಳಪಟ್ಟು ನೊಂದುಕೊಂಡರು. ಮುಂದೆ ಸರದಾರ ಪಟೇಲರು ಹೈದ್ರಾಬಾದ್ ಮೇಲೆ ಪೋಲಿಸ್ ಕಾರ್ಯಚರಣೆ ಮಾಡಿದಾಗ ನಿಜಾಮ ಶರಣಾಗತನಾದನು. ಹೈದ್ರಾಬಾದ್ ಪ್ರದೇಶವು ವಿಮೋಚನೆಗೊಂಡಾಗ ಮಲ್ಲಪ್ಪನವರು ಯಾದಗಿರಿಯಲ್ಲಿ ಸಾರ್ವಜನಿಕ ಸಭೆಯನ್ನು ಉದ್ದೇಶಿಸಿ ಮತನಾಡಿ ಕಾರ್ಯಕರ್ತರು ಸೇಡಿನ ಮನೋಭಾವದಿಂದ ಅನಾಹುತ ಕಾರ್ಯಗಳನ್ನು ಮಾಡಬಾರದೆಂದು ಮನವಿಮಾಡಿದರಲ್ಲದೆ ಅಂದಿನ ಗೃಹಮಂತ್ರಿಗೆ ಅಹಿತಕರ ಘಟನೆಗಳು ನಡೆಯದಂತೆ ಸೂಕ್ತ ಕ್ರಮಗಳನ್ನೂ ಕೈಗೊಳ್ಳುವಂತೆ ಪತ್ರವೊಂದನ್ನು ಬರೆದರು.

ಶಾಂತಿದೂತರಾದ ಮಲ್ಲಪ್ಪನವರ ಪ್ರಭಾವದಿಂದ ಯಾದಗಿರಿಯಲ್ಲಿ ಒಂದು ಸಣ್ಣ ಅಹಿತಕರ ಘಟನೆ ಕೂಡ ನಡೆಯಲಿಲ್ಲ. ಇದು ಅವರ ವ್ಯಕ್ತಿತ್ವದ ಹಿರಿತನವನ್ನು ಪ್ರದರ್ಶಿಸುತ್ತದೆ. ಸ್ವಾತಂತ್ರ್ಯ ನಂತರ ಸುತ್ಮಕ ಮತ್ತು ಸೇಡಂ ಶಾಸಕರಾಗಿ ಮುಂದೆ ಜವಾಹರಲಾಲ ನೆಹರು, ಲಾಲ್ ಬಹಾದ್ದೂರ ಶಾಸ್ತ್ರಿ ಕಾಲದಲ್ಲಿ ವರ್ಕಿಂಗ್ ಕಮಿಟಿಯ ಸದಸ್ಯರಾಗಿ ಇಂದಿರಾಗಾಂಧಿಯವರಿಂದ ಹಿಡಿದು ರಾಜೀವಗಾಂಧಿ ಕಾಲದವರೆಗೆ ರಾಜ್ಯ ಸಭಾ ಸದಸ್ಯರಾಗಿ ಯಾವುದೇ ಅಧಿಕಾರಕ್ಕೆ ಅಂಟಿಕೊಳ್ಳದೆ ಅಪ್ಪಟ ಗಾಂಧೀಜಿಯವರ ಅನುಯಾಯಿಯಾಗಿ ತಮ್ಮ ರಾಜಕೀಯ ಬದುಕಿನಲ್ಲಿ ಹುಣ್ಣಿಮೆಯ ಚಂದಿರನಂತೆ ಯಾವುದೇ ಆರೋಪಗಳಿಲ್ಲದೆ ಕಂಡು ಬಂದ ಇವರು ಇತ್ತಿಚಿನ ಕಲುಷಿತ ರಾಜಕಾರಣದಿಂದ ರೋಸಿಹೋಗಿದ್ದರು.

ಇತ್ತೀಚಿನ ದಿನಗಳಲ್ಲಿ ಅವರು ಕುಷ್ಟರೋಗಿಗಳಿಗೆ ಒಂದು ಉತ್ತಮ ಬದುಕು ಕೊಡಲು ನಿರ್ಧರಿಸಿ ಅವರ ಸಂಪೂರ್ಣ ಕಾರ್ಯದಲ್ಲಿ ತೊಡಗಿದ್ದರು ಇಂತಹ ಮೇರು ವ್ಯಕ್ತಿತ್ವದ ವ್ಯಕ್ತಿಯನ್ನು ಈ ಭಾಗದ ಅಪ್ಪಟ ಗಾಂಧಿ ಎಂದು ಕರೆದರೆ ಯಾವುದೇ ಉತ್ಪ್ರೇಕ್ಷೆ ಎನಿಸದು.

**- ಮಲ್ಲಣ್ಣ ಅಂಬಿಗೇರ**
ಸ್ವಾತಂತ್ರ್ಯ ಹೋರಾಟಗಾರರು.
ಯಾದಗಿರಿ.

# ಧರ್ಮಕ್ಕೆ ಜಯವೆಂದ ದಿವ್ಯವ್ಯಕ್ತಿ

## ಗೆಳೆಯ ಎಸ್. ನಿಜಲಿಂಗಪ್ಪ ಕುರಿತು ಕೊಲೂರು

ನಿಜಲಿಂಗಪ್ಪನವರಂಥ ಸತ್ಯಸಂಧರನ್ನು ಧ್ಯೆಯನಿಷ್ಠರನ್ನು ನಮ್ಮನಾಡು ಮತ್ತೇ ಕಾಣಲಾರದು ಮಗುತನ ಎಂದರೆ ಏನೆಂಬುದನ್ನು ಅವರನ್ನು ನೋಡಿಯೇ ತಿಳಿದುಕೊಳ್ಳಬೇಕು. ಇವರು ನಮ್ಮವರು ಇವರು ವಿರೋಧಿಗಳು ಎಂಬ ಭಾವನೆ ಅವರಲ್ಲಿ ಎಂದೂ ಸುಳಿದಿರಲಿಲ್ಲ ಯಾವ ಪಕ್ಷದವರೇ ಆಗಿರಲಿ ಯಾರ ಗುಂಪಿಗೆ ಸೇರಿರಲಿ ಅವರು ಪರಿಶುದ್ಧರಾಗಿದ್ದಾರೆಂಬುದನ್ನು ಗಮನಿಸಿದರೆ ಸಾಕು ಅವರಿಗಾಗಿ ಏನೆಲ್ಲಾ ಮಾಡಲು ಪ್ರಯತ್ನಶೀಲರಾಗಿರುತ್ತಿದ್ದರು ಅಂಥ ಅಪರೂಪದ ಮನಸ್ಸಿದ್ದಿ ಅವರದು.

ಏಕೀಕರಣ ಪೂರ್ವದ ಹೋರಾಡದ ಸಮಯದಲ್ಲಿ ಒಂದೆರಡು ಬಾರಿ ಅವರನ್ನು ನಾನು ನೋಡಿದ್ದುದುಂಟು ಆದರೆ ಹೇಳಿಕೊಳ್ಳುವಂಥ ಪರಿಚಯ ವಿಶ್ವಾಸಗಳೇನೂ ಬೆಳೆದಿರಲಿಲ್ಲ 1957 ರಲ್ಲಿ ನಾನು ಶಾಸಕನಾಗಿ ಆರಿಸಿ ಬಂದ ನಂತರ ಮುಖ್ಯಮಂತ್ರಿ ನಿಜಲಿಂಗಪ್ಪನವರನ್ನು ಹತ್ತಿರದಿಂದ ಗಮನಿಸುವುದು ಸಾದ್ಯವಾಯಿತು.

ಅದಾಗ ತಾನೇ ವಿಶಾಲ ಮೈಸೂರಿಗೆ ಸೇರಿದ್ದ ನಮ್ಮ ಹೈದರಾಬಾದ್ ಕರ್ನಾಟಕದ ಪ್ರದೇಶಕ್ಕೆ 'ಅಭಿವೃದ್ದಿ' ಎನ್ನುವ ಪದವೇ ಗೊತ್ತಿರಲಿಲ್ಲ ಎಲ್ಲ ರೀತಿಯಿಂದಲೂ ಹಿಂದುಳಿದಿದ್ದ ಪ್ರದೇಶ ಏಕೀಕರಣ ಆದ ಕೂಡಲೇ ನಮ್ಮ ಪರಿಸ್ಥಿತಿ ಅತ್ಯುತ್ತಮವಾಗಿ ಬದಲಾಗಿಬಿಡುತ್ತದೆಂಬ ನಮ್ಮ ಹಲವಾರು ವರುಷದ ಕನಸು ಏಕೀಕರಣವಾದ ಕೂಡಲೇ ಫಲಪ್ರದವಾಗಲಿಲ್ಲ ಇದು ಒಂದು ರೀತಿಯಲ್ಲಿ ಭ್ರಮನಿರಸನದ ಉನ್ಮಾದ್ರವನ್ನು ನಮ್ಮಲ್ಲಿ ಕೆಲವರಿಗೆ ಉಂಟುಮಾಡಿತು ಈ ರೀತಿಯ ನಮ್ಮ ಹತಾಶೆಯ ಕೋಪ ತಿರುಗಿದುದು ಮುಖ್ಯ ಮಂತ್ರಿಗಳ ಕಡೆಗೆ ಹಳೇ ಮೈಸೂರು ಕಡೆಯವರಾದ ಇವರು ನಮ್ಮಗಳ ಹಿತವನ್ನು ಗಮನಿಸುತ್ತಿಲ್ಲ ಎಂಬ ಸಾಧಾರಣವಾದ ಆರೋಪವನ್ನು ನಿಜಲಿಂಗಪ್ಪನವರ ಮೇಲೆ ಹೊರಸುತ್ತಲೇ ಅವರ ಜತೆ ನಾವು ವ್ಯವಹಾರ ಮಾಡುತ್ತಿದ್ದುದು ಈ ರೀತಿಯ ನಮ್ಮ ಅಸಮಾಧಾನಕ್ಕೆ ಹಳೇ ಮೈಸೂರಿನ ಕೆಲವರು ಧುರೀಣರು ಅತೃಪ್ತಿಯ ಬೆಂಬಲವೂ ದೊರೆತಾಗ ಮುಖ್ಯ ಮಂತ್ರಿಗಳ: ಬಗೆಗೆ ಅವಿಶ್ವಾಸ ನಿರ್ಣಯವನ್ನು ಮಂಡಿಸುವ ಯೋಚನೆಗೆ ಚಾಲನೆ ಒದಗಿತು.ಈ ಸಮಯದಲ್ಲಿ ನನ್ನ ಪಾತ್ರವೂ ಸಕ್ರಿಯವಾಗಿತ್ತು. 1958 ರಲ್ಲಿ ಪಕ್ಷದ ಸಭೆಯಲ್ಲಿ ನಿಜಲಿಂಗಪ್ಪನವರನ್ನು ಬಿಟ್ಟ ನಾಯಕತ್ವ ಬಿ.ಡಿ. ಜತ್ತಿಯವರ ಕಡೆಗೆ ಒಲಿಯಿತು ನಮ್ಮ ಕಡೆಯವರೇ ಮುಖ್ಯಮಂತ್ರಿಗಳಾದಾಗಲೂ ನಮ್ಮ ಸ್ಥಿತಿ ಹಾಗೇಯೇ ಉಳಿದಾಗ ' ಅಭಿವೃದ್ದಿ'ಅನ್ನುವುದು ಚಿತ್ರದಲ್ಲಿ ಬರೆಯುವ ಫಲಪ್ರದ ಬೆಳೆ ಅಲ್ಲ ನೆಲ ಉತ್ತು ಹಸನು ಮಾಡಿ ಬೀಜ ಬಿತ್ತಿ ಕಳೆಕಿತ್ತು ನೀರು ನೀಡಿ ನೋಡಿಕೊಂಡು ಕಾವಲು ಕಾದು ಕಷ್ಟಪಟ್ಟು ಬೆಳೆಯಬೇಕಾದ ಬೆಳೆ ಇದಕ್ಕೆ ಸಾಕಷ್ಟು ಸಮಯ ಅಷ್ಟೇ ಪ್ರಯತ್ನ ಎರಡೂ ಬೇಕು ಎಂಬ ಅರಿವು ಆಯಿತು ಆಗ

ನಿಜಲಿಂಗಪ್ಪನವರನ್ನು ನಾನು ಹಿಂದೆ ನೋಡುತ್ತಿದ್ದ ದೃಷ್ಟಿ ಬದಲಾಯಿತು. ಹಾಗಾಗಿ ನಿಜಲಿಂಗಪ್ಪನವರ ನಿಜವಾದ ವ್ಯಕ್ತಿತ್ವ ಏನೆಂಬುದು ಅರಿವಾಗತೊಡಗಿತು ಇಂಥ ನಿಷ್ಕಪಟ, ಮುಗ್ಧ ನೈಜ ಕಳಕಳಿಯ ನಿಷ್ಪಕ್ಷಪಾತದ ವ್ಯಕ್ತಿಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೇ ತಪ್ಪು ಮಾಡಿದೆನಲ್ಲ ಎಂಬ ಮೂಕ ಸಂಕಟವನ್ನು ಬಹಳಷ್ಟು ಅನುಭವಿಸಿದೆ ಈಗಲೂ ಆ ನೋವು ನನ್ನೊಳಗೆ ಮಿಡಿಯುತ್ತಿದೆ.

1962 ರಲ್ಲಿ ನಿಜಲಿಂಗಪ್ಪ ಮತ್ತೇ ಮುಖ್ಯಮಂತ್ರಿ ಆದರು ಆಗಿನ ರಾಜ್ಯ ಸಭೆ ಸದಸ್ಯನನ್ನಾಗಿ ಸದಸ್ಯನನ್ನಾಗಿ ನನ್ನನ್ನು ಆಯ್ಕೆ ಮಾಡಿದರು ಇದು ಅವರ ಬೆಂಬಲಿಗರಿಗೆ ಎಷ್ಟು ಆಘಾತವನ್ನುಂಟು ಮಾಡಿತ್ತೋ ನನಗೂ ಅಷ್ಟೇ ಆಶ್ಚರ್ಯವನ್ನು ಉಂಟುಮಾಡಿತು ದಾಸರ ಧರ್ಮವೇ ಜಯವೆಂಬ ದಿವ್ಯ ಮಂತ್ರ ಕೀರ್ತನೆಯ ಅರ್ಥವನ್ನು ನನಗೆ ಈ ಮೂಲಕ ನಿಜಲಿಂಗಪ್ಪನವರು ಹೇಳಿಕೊಟ್ಟರು.

69 ರಲ್ಲಿ ಕಾಂಗ್ರೆಸ್ ಒಡೆದಾಗ ನಾನು ಆಡಳಿತ ಕಾಂಗ್ರೆಸ್ ಪಕ್ಷಕ್ಕೆ ಸೇರಿದೆ ಆಗಿನ ನಮ್ಮ ಉದ್ದೇಶ ಇದ್ದುದು ಜನಸಾಮಾನ್ಯರು ಅದರಲ್ಲೂ ವಿಶೇಷವಾಗಿ ಹಿಂದುಳಿದವರಿಗೆ ಅನುಕೂಲಕರವಾದ ಉತ್ತಮ ಸರ್ಕಾರ ರಚಿಸಿಕೊಡಬೇಕು ಎಂಬುದು ಆದರೆ ಭ್ರಷ್ಟಾಚಾರವನ್ನು ಕಿಂಚಿತ್ತೂ ನಿಯಂತ್ರಿಸುವುದು ನಮ್ಮಿಂದ ಸಾಧ್ಯವಾಗಲಿಲ್ಲ ಕಾರಣ ನಿಜಲಿಂಗಪ್ಪನವರಂಥ ಪರಿಶುದ್ಧನಾಯಕರು ನಮ್ಮಲ್ಲಿ ಇರಲಿಲ್ಲ ನಿಜಲಿಂಗಪ್ಪ ಅಧಿಕಾರದಲ್ಲಿದ್ದಾಗ ಒಂದು ಕ್ಷಣವನ್ನೂ ತಮ್ಮ ಸ್ವಾರ್ಥದ ಚಿಂತನೆಗೆ ಉಪಯೋಗಿಸಿಕೊಳ್ಳಲಿಲ್ಲ ಅವರ ತ್ಯಾಗಕ್ಕೆ ಪ್ರತಿಫಲವನ್ನು ನಮ್ಮ ಸಮಾಜ ಅಥವಾ ರಾಜಕಾರಣ ಅವರಿಗೆ ನೀಡಲಿಲ್ಲ ಅವರು ತಮ್ಮ ಒಂಬತ್ತು ಜನ ಮಕ್ಕಳಲ್ಲಿ ಯಾರನ್ನೂ ರಾಜಕೀಯಕ್ಕೆ ತರಲಿಲ್ಲ ಪ್ರಪಂಚದ ರಾಜಕಾರಣಕ್ಕೆ ಇದು ಒಂದು ಅತ್ಯುತ್ತಮ ಮಾದರಿ ಆದರೆ ವಿವಾಹಕ್ಕೆ ಮೊದಲೇ ಸಕ್ರಿಯವಾಗಿ ರಾಜಕಾರಣದಲ್ಲಿದ್ದ ಇವರ ಅಳಿಯ ರಾಜಶೇಖರನ್ ಅವರಿಗೆ ಇವರು ಅಧಿಕಾರದ ಪರಮಾವಧಿಯಲ್ಲಿದ್ದಾಗಲೂ ಸರಿಯಾದ ಸ್ಥಾನವನ್ನು ನೀಡಲಿಲ್ಲ ಇವರು ರಾಜಕೀಯದಿಂದ ನಿವೃತ್ತರಾದ ನಂತರವೂ ಇವರಷ್ಟೇ ಸಜ್ಜನಶೀಲರಾದ ರಾಜಶೇಖರನ್‌ಗೆ ಯಾವುದೇ ರಾಜಕೀಯ ಅಧಿಕಾರ ಒದಗದಿರುವುದು ವಿಷಾದರಕ ಮೇಣದ ಬತ್ತಿ ತಾನು ಉರಿದು ಸುತ್ತಲಿನವರೆಗೆ ಬೆಳಕು ಕೊಡುತ್ತದೆ ಅದೇ ಸಮಯಕ್ಕೆ ಅದರ ಕೆಳಗೆ ಇರುತ್ತದೆ ನಿಜಲಿಂಗಪ್ಪನವರೂ ಹೀಗೇ ಉರಿದು ಸುತ್ತಲಿನವರಿಗೆ ಬೆಳಕುಕೊಟ್ಟರು ಅವರ ಹೆಸರಿನಲ್ಲಿ ಯಾರು ಯಾರೋ ಆಸ್ತಿ ಅಧಿಕಾರ ಗಳಿಸಿಕೊಳಡರು ಆದರೆ ಅವರ ಮನೆಯವರಿಗೆ ಏನೇನು ದಕ್ಕಲಿಲ್ಲ ಎಲ್ಲರೂ ಸ್ವಯಂ ಸಾಧನೆಯಿಂದ ಮುಂದೆ ಬಂದವರು ಇಂಥ ಮಾದರಿ ಬದುಕನ್ನು ಇನ್ನೆಲ್ಲಿ ಕಾಣಲು ಸಾಧ್ಯ?

ಸಂದರ್ಶನ-ನಿರೂಪಣೆ: ಡಾ. ಮಂಜುಳ ಹುಲ್ಲಹಳ್ಳಿ

(ಆಕರ: ರಾಷ್ಟ್ರಭೂಷಣ, ಎಸ್. ನಿಜಲಿಂಗಪ್ಪ ಸಂಸ್ಮರಣ ಗ್ರಂಥ ಪ್ರಸಂ: ದೇ ಜ ಗೌ, 2003 ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ)

ಶರಣ ಶರಣನ ಕಂಡು,

ಶರಣೆಂದು ಕರವ ಮುಗಿವುದೆ ಭಕ್ತಿ ಲಕ್ಷಣ.

ಶರಣ ಶರಣನ ಕಂಡು

ಪಾದವಿಡಿದು ವಂದಿಸುವುದೆ ಭಕ್ತಿ ಲಕ್ಷಣ,

ಶರಣ ಚರಣವ ಪಿಡಿಯದೆ,

ಕಂಡು ಕಾಣದೆ ಪೋದನಾಡದೆ,

ಕೂಡಲಚೆನ್ನ ಸಂಗನ ಶರಣರು ಮನ್ನಿಸರಯ್ಯ ಸಿದ್ಧರಾಮಯ್ಯ!

- ಚೆನ್ನಬಸವಣ್ಣ





ಆ ಗಾಂಧಿ - ಈ ಗಾಂಧಿ

**ಮಹಾತ್ಮರೊಂದಿಗೆ ಕೊಲೂರು ಮಲ್ಲಪ್ಪ – 1934 ರಲ್ಲಿ ಸಾಬರಮತಿ ಆಶ್ರಮ**



**ಇಂದಿರಾಗಾಂಧಿಯವರ ಜೊತೆ ಕೊಲೂರು ಮಲ್ಲಪ್ಪ ವಿಚಾರ ವಿನಿಮಯ**





ದೆಹಲಿಯಲ್ಲಿ ಆತ್ಮೀಯರೊಂದಿಗೆ ಕೊಲೂರು ಮಲ್ಲಪ್ಪ
ಬಿ.ಡಿ. ಜತ್ತಿ, ಕಾಮರಾಜ್ ನಾಡಾರ್, ಹಳ್ಳಿಕೇರಿ ಗುದ್ಲೆಪ್ಪ,
ಎಚ್.ಕೆ. ವೀರಣ್ಣಗೌಡ, ಕಡಿದಾಳ್ ಮಂಜಪ್ಪ



**1958ರಲ್ಲಿ ಬೆಂಗಳೂರಿನಲ್ಲಿ ನಡೆದ ಖಾದಿ ಮತ್ತು ಉಣ್ಣೆ ವಸ್ತು ಪ್ರದರ್ಶನದಲ್ಲಿ
ಕೊಲೂರು ಮಲ್ಲಪ್ಪನವರ ಮಾತು**





ಗುಲ್ಬರ್ಗಾ ರೈಲ್ವೆ ನಿಲ್ದಾಣ ಉದ್ಘಾಟನಾ ಸಮಾರಂಭದಲ್ಲಿ ಕೊಲೂರು ಮಲ್ಲಪ್ಪ



ಹೈದ್ರಾಬಾದ್‌ನಲ್ಲಿ ಪಂಡಿತ್ ಜವಾಹರ್ ಲಾಲ ನೆಹರು ಅವರೊಂದಿಗೆ





ಕಾರ್ಯಕ್ರಮವೊಂದರಲ್ಲಿ ಕೊಲೂರರು



ಮುಂಬೈ ಮುಖ್ಯಮಂತ್ರಿ, ಕಾಮರಾಜ್‌ನಾಡರ್ ಅವರೊಂದಿಗೆ ಕೊಲೂರು ಮಲ್ಲಪ್ಪ





ಶಹಾಪುರದ ಕಾಂಗ್ರೆಸ್ ಪಕ್ಷದ ಕಛೇರಿಯಲ್ಲಿ ಕೊಲೂರು ಮಲ್ಲಪ್ಪ ಜೊತೆಯಲ್ಲಿ
ಅಣ್ಣಾರಾವ್ ಗಣಮುಖಿ, ಸಗರದ ಅಚ್ಚಪ್ಪಗೌಡ ಸುಬೇದಾರ್, ಬಾಪುಗೌಡ ದರ್ಶನಾಪುರ



ಬಾಬು ಜಗಜೀವನರಾಮ್ ಅವರೊಂದಿಗೆ ಕೊಲೂರು ಮಲ್ಲಪ್ಪ





ಕೊಲೂರು ಮಲ್ಲಪ್ಪ ಅವರೊಂದಿಗೆ ಸಿ.ಕೆ. ಜಾಫರ್ ಷರೀಫ್,
ಬಾಪುಗೌಡ ದರ್ಶನಾಪುರ, ಹಣಮಂತರಾವ್ ದೇಸಾಯಿ



ಪಕ್ಷದ ಗಣ್ಯಮಾನ್ಯರೊಂದಿಗೆ ಕೊಲೂರು ಮಲ್ಲಪ್ಪ





ಡಾ|| ಶರಣಬಸವಪ್ಪ ಅಪ್ಪ ಅವರಿಂದ ಸನ್ಮಾನ



"ಮಾತನಾಡಿ ಮಲ್ಲಪ್ಪನವರೆ" ಗಣ್ಯರ ಸಹಕಾರ





ಮಲ್ಲಪ್ಪನವರಿಗೆ ಮಾಜಿ ಪ್ರಧಾನ ಮಂತ್ರಿ ಪಿ.ವಿ. ನರಸಿಂಹರಾವ್ ಅವರಿಂದ ಸನ್ಮಾನ



ಕೊಲೂರು ಮಲ್ಲಪ್ಪನವರೊಂದಿಗೆ ಗಣ್ಯರು





ಗಣ್ಯರೊಂದಿಗೆ ಕೊಲೂರು ಮಲ್ಲಪ್ಪನವರು



ಅಭಿನಂದನಾ ಸಮಾರಂಭದಲ್ಲಿ ದೇವೇಂದ್ರಪ್ಪ ಗೌಡ ರಚಿಸಿದ
ಕೊಲೂರು ಮಲ್ಲಪ್ಪ ಕೃತಿ ಬಿಡುಗಡೆ





ಕೊಲೂರರ ಕುರಿತು ಮಾಜಿ ಪ್ರಧಾನಿ ಪಿ.ವಿ. ನರಸಿಂಹರಾವ್



ಕೊಲೂರು ಮಲ್ಲಪ್ಪನವರೊಂದಿಗೆ ಹೆಚ್.ಎಂ. ರೇವಣ್ಣ





ಸಮಾರಂಭದಲ್ಲಿ ಕೊಲೂರು ಮಲ್ಲಪ್ಪನವರು



ಅಭಿನಂದನಾ ಸಮಾರಂಭದಲ್ಲಿ ಕೊಲೂರು ಮಲ್ಲಪ್ಪ





ಕೊಲೂರು ಮಲ್ಲಪ್ಪನವರೊಂದಿಗೆ ವೀರಪ್ಪಮೊಯ್ಲಿ, ಎಚ್.ಕೆ. ಪಾಟೀಲ್,
ಜರ್ನಾಧನ ಪೂಜಾರಿ



ಕೊಲೂರು ಮಲ್ಲಪ್ಪ ಅಭಿನಂದನಾ ಸಮಾರಂಭದಲ್ಲಿ ಹೆಚ್.ಎಂ. ರೇವಣ್ಣ
ಜ್ಯೋತಿ ಬೆಳಗುತ್ತಿರುವುದು





ಮಲ್ಲಪ್ಪನವರ ಅಭಿನಂದನಾ ಕಾರ್ಯಕ್ರಮ........



ಕೊಲೂರು ಮಲ್ಲಪ್ಪನವರಿಗೆ ಹೆಚ್. ವಿಶ್ವನಾಥ್ ಗೌರವ ಸಮರ್ಪಣೆ





ಕೊಲೂರರ ಕುರಿತು ಹೆಚ್. ವಿಶ್ವನಾಥರ ನುಡಿ ನಮನ



ಕೊಲೂರರ ಕುರಿತು ಎನ್. ಧರ್ಮಸಿಂಗ್‌ರ ಅಭಿನಂದನೆ

## ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

### ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ವಿ. ಹಳ್ಳಿಕೇರಿ | ಡಾ॥ ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ॥ ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಡಾ॥ ಸಂಧ್ಯಾರೆಡ್ಡಿ | 20.00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |

| | | | |
|---|---|---|---|
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎನ್. ಚಂದ್ರಯ್ಯ | 20.00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20.00 |
| 18. | ಫ಼ಂ. ನಾಗಪ್ಪ | ಡಾ॥ ಎಂ.ಎಸ್. ಪಾಟೀಲ್ | 15.00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ॥ ಹೆಚ್.ಎಂ. ಪಂಚಾಕ್ಷರಯ್ಯ | 15.00 |
| 20. | ಗಂಗಾಧರ್ ನಮೋಶಿ | ಡಾ॥ ಕವಂಟೆ ಹಾಗೂ ಇತರರು | 15.00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15.00 |
| 22. | ಆರ್. ಗುಂಡೂರಾವ್ | ಈಶ್ವರ ದೈ ತೋಟ | 20.00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15.00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15.00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15.00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30.00 |
| 27. | ಬಿ.ಎಲ್. ಸುಬ್ಬಮ್ಮ | ಡಾ॥ ಡಿ.ಎಸ್. ಜಯಪ್ಪಗೌಡ | 15.00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20.00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವರ್ಣೇಕರ್ | 20.00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಉಷಾ ಹಾರೋಗದ್ದೆನಾಯಕ್ | 20.00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30.00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15.00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20.00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25.00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30.00 |
| 36. | ಎಸ್.ಸಿ. ಮಲ್ಲಯ್ಯ | ಡಾ॥ ಟಿ.ಸಿ. ಪೂರ್ಣಿಮ | 20.00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30.00 |

